ತೋರಣ

ಅಕ್ಟೋಬರ್

# ಹರಾವಶೇಗಾಗಿ

ಜಿ. ವರದರಾಜರಾವ್, ಎಂ.ಎ.

ಸತ್ಯಶೋಧನ ಪ್ರಕಟನಮಂದಿರ
ಕೋಟೆ, ಬೆಂಗಳೂರು ನಗರ

# ಮುನ್ನುಡಿ

ನನ್ನ ತರುಣಮಿತ್ರರು – ವರದರಾಜರಾಯರು ತಮ್ಮ ಕಾವ್ಯ 'ತೋರಣ'ವನ್ನು ಹೊಸಗನ್ನಡದ ಬಾಗಿಲಿಗೆ ತೂಗಹಾಕಲು ನನ್ನ ಮುನ್ನುಡಿ – ಮೊಳೆಗಳಿರಡಿರಲಿ ಎಂದು ಅಪೇಕ್ಷಿಸಿದ್ದಾರೆ. ಈ ಕವಿಗಳು ಕನ್ನಡಜನಕ್ಕೆ ಅಪರಿಚಿತರಲ್ಲ. ಹೋದ ಹತ್ತು ವರುಷ ಕವನ ಪ್ರಕಟ ಮಾಡುತ್ತಲೆ ಇದ್ದಾರೆ; ಲೇಖಕರೆಂದೂ ಮುಂದೆ ಬಂದಿದ್ದಾರೆ. ಇಂಥವರ ಕವನಕ್ಕೆ ಮುನ್ನುಡಿ ಬರೆಯುವುದೆಂದರೆ ಪ್ರೌಢವಧುವಿನೊಡನೆ ಬೆಂಬಲ ಗಿತ್ತಿಯಾಗಿ ಹೋದಂತೆ. ಆದರೂ ಈ ವಿನಯದಲ್ಲಿಯೂ ಸ್ವಾರಸ್ಯ ವಿರುವಂತೆ, ನನ್ನ ಉಪಚಾರದಲ್ಲಿಯೂ ಸಂತೋಷವಿದೆ.

ಶ್ರೀ. ವರದರಾಜರಾಯರು ನನಗೆ ಬರೆದ ಒಂದು ಕಾಗದದಲ್ಲಿ— 'ಈ ಸಂಗ್ರಹದ ಬಹು ಭಾಗ ನನ್ನ ವಿದ್ಯಾರ್ಥಿಜೀವನದ ಕಾಲಕ್ಕೆ ಸೇರಿದ್ದು. ಕಡೆಕಡೆಯ ಕವಿತೆಗಳು ಇತ್ತೀಚಿನವು. ಆದ್ದರಿಂದ ಅನು ಕರಣದಿಂದ ಮೊದಲಾಗಿ ಅನುಭವದವರೆಗೆ ಇಲ್ಲಿನ ಕವನಗಳು ರಚಿತ ವಾಗಿವೆ. ವಿಷಯದಲ್ಲಿ ವೈವಿಧ್ಯವೇನೋ ಬಹುಮಟ್ಟಿಗೆ ಕಂಡುಬರುತ್ತದೆ, ಗುಣಾವಗುಣಗಳು ಎಷ್ಟುಮಟ್ಟಿಗೆ ಇವೆಯೋ ನಾನು ಕಾಣೆ. ಅಂತೂ ಹಾತೊರೆದು ಹಂಬಲಿಸಿ ಹಾರೈಸಿದ ಮುಗುಳೊಂದು ಇಂದು ಅರಳಿ ನಿಂತಿದೆ. ಅದರ ಬಂಡು ಕಹಿಯೋ ಸಿಹಿಯೋ ಎಂಬುದಾಗಿ ಇತ್ಯರ್ಥ ಮಾಡಿ ಹೇಳುವ ಶಕ್ತಿ ಅದಕ್ಕಿಲ್ಲ. ಮಧುಪನಿಗೆ ಮಾತ್ರ ಅದು ಸಾಧ್ಯ ವಾದೀತು' ಎಂದು ಚೊಕ್ಕಾಗಿ ಕಾಣಿಸಿದ್ದಾರೆ. ಹೀಗೆ ವಾಸ್ತವದ ಅರಿ ವಿರುವ ಕುತೂಹಲಕ್ಕೆ ವಿಶ್ವಾಸದ ಒಂದೆರಡು ಮಾತುಗಳನ್ನು ಜೋಡಿಸು ವುದು ತೀರ ಉಚಿತವಾಗಿದೆ. ಸ್ವತಃ ನಾನು ಕವಿಯಾಗಿದ್ದರೂ, ಬೆಳೆಯು ಲಿರುವ ಪ್ರತಿಭಾವಂತ ಕವಿಗಳು ನನ್ನನ್ನು ಸಹೃದಯನಾಗಿ ಕಾಣುತ್ತಿರು ವುದು ನನ್ನ ಜೀವನಾನಂದದ ಒಂದು ವಿಶೇಷವೆಂದು ನಾನು ಬಗೆಯು ತ್ತೇನೆ. ಎಲ್ಲ ಕವಿತ್ವವೂ ಒಂದು ಮಹಾಕವಿಯ ಹೃದಯದಿಂದಲೇ ಬರುವುದು. ಹೇಳುವಾಗ ಕವಿ, ಕೇಳುವಾಗ ಕಿವಿಯಾಗುತ್ತವೆ ಈ ವಿವಿಧ ರಸಿಕ ಹೃದಯಗಳು.

"ತೋರಣ"ದಲ್ಲಿ ಅನುಕರಣದ ಅನುಸರಣವಿದೆ; ನಿಜ. ಆದರೆ ಅದು ಕೃತಿಯಾಗಿದೆ, ವಿಕೃತಿಯಾಗಿಲ್ಲ. ಉತ್ತಮಿಕೆಯ ಅನುಸರಣವು ಸಜ್ಜನಿಕೆಯು ಒಂದು ವಿನಯ ವಿಶೇಷ. ಅನುಕರಣದ ಹಿಂದೆ ವಿವೇಕದ ದೃಷ್ಟಿ ಅನಿಮೇಷವಾಗಿದ್ದರೆ, ಅನುಕರಣ ಹಿಂದೆ ಬಿದ್ದು, ದೃಷ್ಟಿ ಮುಂದಾಗುತ್ತದೆ. ವರದರಾಜರಾಯರು ಯಾವ ಅನುಕರಣವನ್ನೂ ವೃದ್ಧಕವಿ ಸೇವಾಭಾವದಿಂದ ಮಾಡಿರುವುದರಿಂದ, ಅವರ ಸಹಜಶಕ್ತಿಯ ಕಲಾ ವೃದ್ಧಿಯಾಗಿದೆ. ವರಕವಿಗಳಾದ ಶ್ರೀ. ಪುಟ್ಟಪ್ಪನವರು ಮೊದಲಾದವರ ಭಂಗಿ, ಭಣಿತಿಗಳ ಶ್ರುತಿಯನ್ನು ಹಿಡಿದರಾಗಲಿ, ಅವುಗಳ ರಾಗವನ್ನೆತ್ತಿದರಾಗಲಿ ತಪ್ಪೇನು? ಇಷ್ಟಾಗಿ ಇವರ ಕವನದಲ್ಲಿ ಆ ಭಾಗ ಬಹಳಿಲ್ಲ. ಭಾಷಾಸ್ಖಾಲಿತ್ಯವೇನೋ ಎನಿಸಬಹುದಾದ ಅಚ್ಚಿನ ತಪ್ಪುಗಳು ಅಲ್ಲಲ್ಲಿ ಒಂದೆರಡು ಇಣಿಕಿದರೂ ಇಲ್ಲಿಯ ಶೈಲಿಯಲ್ಲಿ ಒಂದು ಪ್ರಸಾದಗುಣವಿದೆ. ತಿಳಿಹಾಲೆ ತುಳುಕಿ ಪಾತ್ರೆಯ ಮೈಗೆ ಬೆಣ್ಣೆಯ ಹೆಡಸು ಏರುವಂತೆ– ಅನೇಕ ಕವನಗಳು ಸಹಜವಾಗಿ ಸೂಕ್ತಿಗರ್ಭಿತವಾಗಿವೆ; ಭಾವ ಶಾಂತವಾದ ಮೇಲೂ ಸ್ಮೃತಿನಭದಲ್ಲಿ ಉಕ್ತಿಗಳು ಹಾಗೇ ಮಿನುಗುವುವು.

ಕವಿತ್ವದ ಅಭೀಪ್ಸೆ, ನಿಸರ್ಗಸೌಂದರ್ಯಾನುಭವ, ಮಾನವ ಪ್ರೇಮದ ಆಕರ್ಷಕ ದರ್ಶನ, ಆತ್ಮೀಯಜನವಿರಹ, ವಾಸ್ತವಜೀವನದ ಪ್ರಖರ ನಿಖರತೆ– ಆದರೂ, ಸಹಜವಾದ ಧೀರತೆಯ ಒಂದು ಕೆಚ್ಚು– ಇವೆಲ್ಲ ಇಲ್ಲಿಯ ಕವನಗಳಲ್ಲಿ ರುಚಿವೈವಿಧ್ಯವನ್ನು ತಂದಿವೆ. "ತೋರಣ" ದಲ್ಲಿ ಮುಚ್ಚುಮರೆಯಿಲ್ಲ; ಮುಗುಳೂ ಮುಳ್ಳೂ ಸಮಾನಾಲಂಕಾರವಾಗಿ ತಾಯಿನುಡಿಯ ತಲೆಗೆ ಕಟ್ಟಿಕೊಂಡಿವೆ. ಸಂಗ್ರಹದ ಉಪಾಂತ್ಯದಲ್ಲಿ ಕೌಟುಂಬಿಕ ಪ್ರೇಮದ ಸುಖಶ್ರುತಿಯೊಡನೆ ಅದಲು ಬದಲಾಡುತ್ತ ಸಾಮಾಜಿಕ ಜೀವನದ ಭೈರವರಾಗವೊಂದು "ಬಾಳುಗೀತ" ಎಂಬ ಕವಿ ಉಕ್ತಿಗೆ ಅಕಲ್ಪಿತ ಭಾವ ಪ್ರಕಾಶನ ಮಾಡುತ್ತ ಪುರಂದರದಾಸರ ಪುಣ್ಯಸ್ಮರಣೆಯೊಂದಿಗೆ ಮುಕ್ತಾಯಗೊಳ್ಳುತ್ತದೆ. "ನಗುನಗುತ ಹಗುರವಾಗು" ಎಂದು ಜೀವಕ್ಕೆ ಹೇಳಿಕೊಳ್ಳಬಲ್ಲ ಕವಿಗೆ ಯಾವ ರಾಗವೂ ಸರಾಗವಾಗಿ ಸಾಗುವುದು. "ಬದುಕು ಬರಿವೇಷ" "ಹಗಲು ಕಠೋರ" ಎಂದು ಉಕ್ತಿಯ ಸಿಡಿಮದ್ದು ಹಾರಿದರೂ "ಸಂಜೆಮಲ್ಲಿಗೆ"ಯೊಡನೆ

ತನ್ಮಯನಾಗಬಲ್ಲವನಿಗೆ “ಹಸುರ ಹೆಸರೆತ್ತಿದರೆ ಹೊಸ ಹರುಷ ಹೊಮ್ಮು ವುದು ನೈತುಂಬ ತುಂಬಿ” ಎಂದು ಅನುಭವಿಸಿದವನಿಗೆ ಬಾಳಿನ ಚಳಿ ಬಿಸಿಲು ಹಿಗ್ಗಿಸುವುದಲ್ಲದೆ ತಗ್ಗಿಸಲರಿಯದು.

ಶ್ರೀ. ವರದರಾಜರಾಯರು ತಮ್ಮ ಪ್ರಾಸಾದಿಕತೆಯೊಡನೆ, ತಮ್ಮ ಉಕ್ತಿವೈಚಿತ್ರ ಬೆರೆಸಿ, ತಮ್ಮ ದೃಷ್ಟಿಯ ಚೂಪಿಗೆ ತೋರಿದ ನವದರ್ಶನ ಗಳನ್ನು ಬಾಳಿನ ಗೀತಗಳನ್ನಾಗಿ ಕಟ್ಟಿ, ನಾಡಿಗೊಂದು ಜೀವ, ನುಡಿ ಗೊಂದು ಕಳೆ ತರಲಿ.

ಸೊಲ್ಲಾಪುರ
೧೭-೭-೪೭

ದ. ರಾ. ಬೇಂದ್ರೆ

# ಅರಿಕೆ

ಇಂದು ಕನ್ನಡಸಾಹಿತ್ಯದಲ್ಲಿ ಒಬ್ಬೊಬ್ಬ ಗ್ರಂಥಕರ್ತನ ವೈಶಿಷ್ಟ್ಯವೇನು ಎಂದು ವಿಮರ್ಶಿಸಿ ನೋಡುವ ಕಾಲ ಬಂದಿದೆ. ಶ್ರೇಷ್ಠ, ಕನಿಷ್ಠ ಮತ್ತು ಸಾಮಾನ್ಯ – ಎಂಬ ದರ್ಜೆಗಳನ್ನು ನಿಷ್ಕರ್ಷಿಸಿ ಹೇಳುವ ಧಾರ್ಷ್ಟ್ಯ ಎಲ್ಲೆಲ್ಲಿಯೂ ಕಂಡುಬರುತ್ತಿದೆ. ಇಂಥ ಸನ್ನಿವೇಶದಲ್ಲಿ, ಯಾವುದೊಂದು ಅಗ್ಗಳಿಕೆಯನ್ನೂ ಗಳಿಸದ ನಾನು, ಈ ನನ್ನ ಕೃತಿ ಸಂಕಲನವನ್ನು ಜನರ ಮುಂದೆ ಇಡುವುದಾದರೂ ಹೇಗೆ ಎಂಬುದಾಗಿ ನನ್ನ ಹೃದಯ ಅಳುಕುತ್ತಿದೆ. ಆದರೆ, ಇಲ್ಲಿನ ಹಲವಾರು ಕವಿತೆಗಳನ್ನು ನಾನು, ನನ್ನ ಗೆಳೆಯರು ಮತ್ತು ಹಿರಿಯರ ಮುಂದೆ ಹಾಡಿ ತೋರಿಸಿದಾಗ ಅವರು ವಿಶ್ವಾಸದಿಂದ ಭುಜ ತಟ್ಟಿದ್ದುಂಟು. ಹಲವಾರು ಸಭೆ, ಸಮಾರಂಭಗಳಲ್ಲಿ ಓದಿದಾಗ, ಸಹೃದಯರು ಸ್ವಾಗತಗೊಟ್ಟಿದ್ದುಂಟು. ಈ ವಿಶ್ವಾಸ, ಸ್ವಾಗತಗಳನ್ನೇ ನೆಚ್ಚಿ, ಈ ನನ್ನ ಮೊದಲ ಸಂಗ್ರಹವನ್ನು ಜನಗಳ ಮುಂದೆ ಇಂದು ಇಟ್ಟಿರುತ್ತೇನೆ.

ಈ ಕವನಗಳಲ್ಲಿ, ಅನೇಕ ಕವಿತೆಗಳು ಈಗಾಗಲೆ ಬಿಡಿಬಿಡಿಯಾಗಿ ಹಲವಾರು ಕನ್ನಡ ಪತ್ರಿಕೆಗಳಲ್ಲಿ ಪ್ರಕಟವಾಗಿವೆ. ಆ ಮೂಲಕ ನನಗೆ ಉತ್ತೇಜನವಿತ್ತ ಮಾನ್ಯ ಸಂಪಾದಕರುಗಳಿಗೆಲ್ಲ ನಾನು ಚಿರ ಕೃತಜ್ಞನಾಗಿರುತ್ತೇನೆ. ಈ ಕವಿತೆಗಳ ವಿಷಯವಾಗಿ ನಾನು ಪ್ರತ್ಯೇಕವಾಗಿ ಏನನ್ನೂ ಹೇಳಬೇಕಾಗಿಲ್ಲ. ನನ್ನ ಕೃತಿರಚನೆಯ ವಿಷಯದಲ್ಲಿ—ಅದು ಗದ್ಯವೇ ಆಗಲಿ, ಪದ್ಯವೇ ಆಗಲಿ ಭೇದವಿಲ್ಲದೆ—ವಿಶ್ವಾಸವಿಟ್ಟು ಆಗಾಗ್ಗೆ ತಮ್ಮ ಸದಭಿಪ್ರಾಯವನ್ನು ವ್ಯಕ್ತಪಡಿಸುತ್ತಿರುವ ಶ್ರೀ. ದ. ರಾ. ಬೇಂದ್ರೆಯವರು ತಮ್ಮ ಮುನ್ನುಡಿಯಲ್ಲಿ ಇವುಗಳನ್ನು ಕುರಿತು. ಗುಣದೋಷಗಳನ್ನು ಪೃಥಕ್ಕರಿಸಿ, ದಾರಿ ತೋರಿರುತ್ತಾರೆ. ಇದಕ್ಕಾಗಿ ನಾನು ಶ್ರೀಯುತರಿಗೆ ಚಿರಋಣಿಯಾಗಿರುತ್ತೇನೆ.

ಈ ಪುಸ್ತಕ ಪ್ರಕಟನೆಯಲ್ಲಿ ನನಗೆ ನೆರವಾದವರಿಗೆಲ್ಲ ನನ್ನ ಧನ್ಯವಾದಗಳು.

ಬೆಂಗಳೂರು<br>
೧-೧೧-೪೭ }

ಜಿ. ವರದರಾಜರಾವ್

# ಅರ್ಪಣೆ

ತೊದಲನುಡಿಯನು ಕಲಿಸಿ ಅಗಲಿಹೆ
ಜನ್ಮದಾತೆಯೆ, ತಾಯಿಯೆ!
ಕವನಸಿರಿಯನು ತುಂಬಿ ತಂದಿಹೆ,
ಅರ್ಪಿಸಿರುವೆನು ಮಾತೆಯೆ!
ಎನ್ನ ಜನಗಳು ಹೊಗಳಲು,
ಎಲ್ಲ ನಿನಗೇ ಮೀಸಲು!

## ಒಳಪಿಡಿ



[ತಿದ್ದುಪಡಿ:—೨೪ನೆಯ ಪುಟದಲ್ಲಿ ಮೂರನೆಯ ಪಂಕ್ತಿಯಲ್ಲಿ "ಸಂತಸ" ಎನ್ನುವುದಕ್ಕೆ ಬದಲಾಗಿ "ಸಂತತ" ಎಂದು ಓದಿಕೊಳ್ಳಬೇಕಾಗಿ ಪ್ರಾರ್ಥನೆ.]

# ತೋರಣ

ಹಲವು ಕವಿಗಳ ಕಾವ್ಯವಾಣಿಯ
ಮಿಡಿದ ಕನ್ನಡ ದೇವಿಯೆ!
ತಿದ್ದಿ ಬಂದಿಹೆ ನನ್ನ ಮಾತೆಯ
ತೊದಲ ನುಡಿಯನು ತಾಯಿಯೆ,
ಹೊಸಲು ಕಾಣಲು ಹೃದಯ ಹಿಗ್ಗಿತು ಬಂದೆ ತೋರಣ ಕಟ್ಟಲು.

ಬೆಳೆದ ಬಾಳನು ಎಳೆಯ ಬಾಳಿನ
ತಿಳಿಯ ಮನಸಿಗೆ ಹೊಂದಿಸಿ
ಕಳೆದ ದಿನಗಳ ನನ್ನ ನೆನಪಿನ
ಬಲೆಯ ಬಿಗಿಯಲಿ ಬಂಧಿಸಿ
ನಕ್ಕು ನಲಿಯುವೆ, ತೂಗಿ ತೊನೆಯುವೆ, ತಿರೆಯ ತೊಟ್ಟಿಲ ಮಡಿಲಲಿ.

ಪ್ರೇಮದಿಂದಲಿ ಬಾನಿನರಸಿಯು
ಒಲಿದು ಜೋಗುಳ ಹಾಡಲು,
ನಿದ್ರೆ ನೆಳಲಲಿ ಕನಸ ರಾಣಿಯು
ಹೊನ್ನಿನೈಸಿರಿ ತೋರಲು,
ಅಲ್ಲಿ ಕಾಣುವೆ ಕವನ ದೇವಿಯು ತುಂಬಿ ತಂದಿಹ ಭಾಗ್ಯವ.

ಚೆಲುವಿನಂಕದ ಮೇಲೆ ನಲಿಯುವೆ
ಒಮ್ಮೆ, ಕೇಕೆಯ ಹಾಕುತ,
ಅಳಲ ಬೆಂಕಿಗೆ ಸಿಕ್ಕಿ ಕುದಿಯುವೆ
ಒಮ್ಮೆ, ಕಂಬನಿ ಕರೆಯುತ,
ಆಗ ನುಡಿವೆನು ಹೃದಯದೊಳಗಿನ ಗೆಲವು, ನೋವಿನ ಪರಿಯನು.

ನುಡಿಯ ಗಾರುಡಿಯಿಂದ ಬಂಧಿಸಿ
ಎದೆಯ ವಾಣಿಯ ತಿರುಳನು,
ತಳಿರ ತೋರಣದಂತೆ ಪೋಣಿಸಿ
ಗುಡಿಗೆ ಕಟ್ಟುತ ಮೆರೆವೆನು!
ಸೇವೆಗೈಯುವೆ, ಶ್ರದ್ಧೆ ಭಕ್ತಿಗಳಿಂದ ಹಾಡುವೆ, ಬೇಡುವೆ.

ಗಾಳಿ ಬೀಸಲು ಕೊರಲ ದನಿಯನು
ತೇಲಿ ಬಿಡುವೆನು ಮೆಲ್ಲಗೆ
ಗಾನ ಸೇರಲು ನಿನ್ನ ಬಳಿಯನು
ಬಯಕೆ ಸಲ್ವುದು ಅಲ್ಲಿಗೆ,
ನಿನ್ನ ಕಂದನ ಆಶೆ ಸಲ್ಲಿಸು, ಸಲಹು ಕನ್ನಡ ದೇವಿಯೆ!

---

## ಬೀಳುತ್ತಿರುವ ತಾರೆಗೆ

ಅಕಟಕಟ ಎಲೆ ತಾರೆ! ಮುಗಿಲ ಸಾಮ್ರಾಜ್ಯದಲಿ
ರಾತ್ರಿಯಲಿ ನಿನ್ನೆದೆಯ ಬಿಳಿಬೆಳಕ ಸುರಿಸಿ
ಮಿನುಗದೇಕುರುಳುತಿಹೆ ಕತ್ತಲೆಯ ಮಡಲಿನಲಿ
ಚಣಚಣಕು ನಿನ್ನೊಡಲಿನೈಸಿರಿಯ ನಶಿಸಿ.

ಬಾನ್ಗುಡಿಯ ಲಕ್ಷದೀಪಗಳಂತೆ ಕಣ್ಗೆಸೆವ
ನಿನ್ನ ಒಡನಾಡಿ ತಾರೆಗಳ ಸಹ ಕಾದು,
ಸೋತು, ನೀನಪಮಾನದಿಂದುರುಳುತಿರೆ ಹೊಳೆವ
ಈ ಬಾಳು ತಾ, ಕಂದಿಹೋಗುವುದೆ ಸೀದು?

ಧರೆ, ಗಗನ, ರಮಣಿಯರು ಅಕ್ಕತಂಗಿಯರಂತೆ
ನಳನಳಿಸಿ ಹಿಗ್ಗುತಿರೆ ಎದೆಗಳನು ಬೆರೆಸಿ
ಲಕ್ಷೋಪಲಕ್ಷ ನಕ್ಷತ್ರಗಳು ನಿನ್ನಂತೆ
ನಿಂತಿರೆ, ಕೆಲಸಕಟ್ಟೆದಳೆ ಬಾನಿನರಸಿ?

ನಿಷ್ಕರುಣೆ ಬಾನ್ವೆಣ್ಣು, ನೀ, ತಪ್ಪನೊಂದೆಸಗೆ
ನಿನ್ನಿನಿತು ಲಕ್ಷಿಸದೆ ಕೋಪವನು ಕಾರಿ,
ನೂಕಿದಳೆ ಬಾಳ್ಮರೆತು ನಡೆಯುವೀ ನರರೆಡೆಗೆ
ಅರರೆ! ನೀನಿಂತು ಬಿದ್ದಳಿಯುವೆಯ ಜಾರಿ?

ಎಲೆ ತಾರೆ! ನಿಷ್ಕರುಣಿ ಬಾನ್ದೇವಿ ತಾನು
ನಿನ್ನ ನಿರ್ಲಕ್ಷ್ಯದಲಿ ನೂಕಿದೊಡೆ ಏನು?
ಬಾ, ಬಾರ ತಡೆಯಿರದೆ ನನ್ನೆದೆಯ ಬಳಿಗೆ
ಎಡೆಯಿರುವುದೆದೆಯೊಳಗೆ ನಿಂತು ನೀ ಬೆಳಗೆ.

---

# ಅನಂತಗಾಯಕ

ಸಕಲ ದಿಗ್ದಿಗಂತಗಳನು
ದಾಟಿ ಮೆರೆವ ಜಗದಲಿ
ಬುವಿ, ನಭೋ ವಿಶಾಲಗಳನು
ಜರೆವ ಗಿರಿಯ ಶಿರದಲಿ
ಕೂತು ಪರಮ ಹರ್ಷದಿ–ಸೊಗ
ಸಾದ ವಿಮಲ ಪೀಠದಿ,
ಕತ್ತ ನಲಿಸಿ ಸೊಗವ ಸುರಿಸಿ
ವಿವಿಧ ದನಿಯನೇಳಿಸಿ
ಬಾಳಿಗಮರ ಕಳೆಯ ಮುಡಿಸಿ
ಹಾಡು, ಮನವ ಮೋಹಿಸಿ.
ಹೇ, ಅನಂತಗಾಯಕ!–ಸುಖ
ಜೀವ ಶಕ್ತಿದಾಯಕ!

ರವಿಯನಾಟವಾಡಿಸುತ್ತ
ನಲಿಯೆ ಸಂಜೆ ಉಷೆಯರು
ಕುಣಿದು ಮಣಿದು ಸಾರಲಿತ್ತ
ಸುಂದರ ಋತುವರ್ಯರು
ತಿರೆ, ಜಗದ ಜನನಿಸಖಿ,–ರಾ
ರಾಜಿಸಲು ಹಸನ್ಮುಖಿ,
ಬನದ ದೇವಿ ಕಳೆಯ ತೀವಿ
ಅಲರುಗಳನು ಅರಳಿಸೆ

ಬಣ್ಣ ಬಣ್ಣದಲರನೋವಿ
ತಂಪಗಾಳಿ ಸಿಂಚಿಸೆ
ವೀಣೆ ಮಿಡಿಯೊ ವೈಣಿಕ! – ನೆರೆ
ನೇಹಸಿರಿಯ ಪೋಷಕ!

ನದಿಯು ವರ್ಷವರ್ಷಗಳಲಿ
ಬಳಲಿ ಹಾಡುತಿರುವುದು
ತೆರೆತೆರೆಗಳ ನರ್ತನದಲಿ
ಬೇರೆ ಗಾನ ಬಾರದು,
ನದಿಯ ಗಾನ ಕೇಳಿಯ? – ನೀ
ಕಲಿಸು ಬೇರೆ ಗೀತೆಯ,
ನೂರುಗಾನಗಳನು ನುಡಿವ
ಹಕ್ಕಿಗೊರಲ ಪ್ರೀತಿಸಿ
ಅವುಗಳೊಳಗೆ ನಿನಗೆ ಬರುವ
ಹಾಡುಗಳನು ಹಾಡಿಸಿ
ನಕ್ಕು ನಲಿಯೊ ಗಾಯಕ! – ಸಂ
ಗೀತವರರ ನಾಯಕ!

ನಿನ್ನ ಮಧುರ ಗೀತಗಳನು
ದೂರದಿಂದ ಆಲಿಸಿ,
ಆ ಅನಂತಗಾನಗಳನು
ಕವನಗಳಲಿ ಕೂಡಿಸಿ
ಸಾರುವೆನೀ ವಿಶ್ವಕೆ – ಇದೆ
ನಿನಗೆ ನನ್ನ ಕಾಣಿಕೆ.

ಕೋಟಿಯುಗಗಳಿಂದು ಬಂದು
ಕಳೆಯೆ, ಗಾನ ಸಾಗಲಿ.
ಸವಿಯು ಗಾನದೊಳಗೆ ಮಿಂದು
ಅವು ನವೀನವಾಗಲಿ.
ಹೇ, ಅನಂತಗಾಯಕ!–ನೀ
ನಲಿಯೊ, ವಿಶ್ವಮೋಹಕ!

---

# ಪೂರ್ಣಚಂದ್ರ

[ಲಾಲಬಾಗಿನ ಬಂಡೆಯಿಂದ ಕಂಡದ್ದು]

ನಿಷ್ಪಂದ ನಿರ್ಮಲಿತ ಗಿರಿಶಿರದ ಪೀಠದಲಿ
ಸಂಜೆ ಸಮಯದಿ ಮುದದಿ ಎಳೆಬಾಳುಗಳ ಬೆರೆಸಿ
ಗೆಳೆಯನೊಡಗೂಡಿರಲು ಮಾತುಗಳ ಮಳೆಸುರಿಸಿ
ಶಶಿ ಬರಲು ಮೆಲುಮೆಲನೆ ಪೂರ್ವ ದಿಗ್ದೇಶದಲಿ
ಪಡುವಲಿನ ಮಡಲಿನಿಂದೆದ್ದು ಚೆಲ್ಲಿರೆ ಬೆಳಕು
ರಂಗು ರಂಗುಗಳ ಮುಗಿಲುಗಳು ಸುತ್ತಲು ನಿಂತು
ಸಂತಸವ ಸುರಿಯೆ, ಅರೆ ಗಳಿಗೆ ಶಾಂತಿಯನಾಂತು
ಮೈಮರೆತೆ, ನೀರವತೆ ಹೆಚ್ಚುತಿರೆ ಚಣಚಣಕು!
ನೀನೆತ್ತಲಿಂದೈತಂದೆ, ಓ, ಬೆಳಕಿನೊಡೆಯ!
ಕಿವಿ, ಮೂಗು, ಕಣ್ಣು, ಕೈ, ಕಾಲುಗಳು ನಿನಗಿಲ್ಲ
ಹೊಂಬಣ್ಣ ಹೆಪ್ಪುಗಟ್ಟಿಹುದು ದೇಹದಲೆಲ್ಲ
ಮನ ಮುತ್ತಿಡಲು ಬಯಸುವುದು, ಹಾ! ಸಿಕ್ಕದಿಹೆಯ!
ಚಂದಿರನೆ! ನುಡಿಯೊಂದುಳಿದು ಕುಂದಿರದು ನಿನಗೆ!
ಆದರೆನಗೇನು, ನಾ, ಕವಿಯಾಗಿರುವವರೆಗೆ!

---

# ಇರುಳು

ಬೆಳಕ ಸುರಿದು ಬಳಲಿ ಬಂದ
ರವಿಯನಪ್ಪಿ ಮುದ್ದಿಸಿ,
ಅವನಿಗಾಗಿ ಕಾದು ನಿಂದ
ಸಂಜೆದೇವಿಗೊಪ್ಪಿಸಿ
ಬಹಳು ರಜನಿ ಮೋಹಿನೀ!–ಸುಖ
ನಿದ್ರೆದೇವಿ ಸಂಗಿನೀ!

ಶತಸಹಸ್ರ ತಾರೆಗಳನು
ಗಗನಭವನಕೊದಗಿಸಿ
ನೂರು ತೆರನ ದೀಪಗಳನು
ಮನೆಗಳೊಳಗೆ ಹತ್ತಿಸಿ
ಕುಣಿವಳಿಳಿದು ಯಾಮಿನೀ!–ಸೌ
ಭಾಗ್ಯ ಶಾಂತಿದಾಯಿನೀ!

ಆಟಗಳಲಿ ಬಳಲಿ ಬಂದ
ಮಕ್ಕಳುಗಳ ಮಲಗಿಸಿ
ನುಣ್ಣುಡಿಗಳ ಜಾರಿ ಬಂದ
ಲಾಲಿಗಳನು ಹೇಳಿಸಿ
ಬಹಳು ಕೃಪಾಪಾಲಿನೀ!–ನೀಳ್
ಕೇಶರಾಶಿರಂಜಿನೀ!

ಸಕಲ ದೆಸೆ ವಿಭಾಗಗಳನು
ಶಾಂತಿ ಬಲೆಗೆ ಸಿಲುಕಿಸಿ

ತನ್ನ ಮನದ ಆಶೆಗಳನು
ತಣ್ಗದಿರಲಿ ಬಿಂಬಿಸಿ
ಬಹಳು ಕನಸ ಕರೆಯುತ.–ಕೈ
ಚಾಚಿ ದಾರಿತೋರುತ.

ಜಗವನಾವ ತೊಟ್ಟಿಲಲ್ಲಿ
ಇಟ್ಟು, ತೂಗಿ ನಲಿವಳೋ,
ಯಾವ ಲಾಲಿ ಸುಧೆಯ ಚೆಲ್ಲಿ
ಮೈಯ ತಟ್ಟಿ ಮೆರೆವಳೋ,
ಜಗವೆ ನಿದ್ರೆಗೈವುದು–ಮೈ
ಮರೆವ ಮೂರ್ಛೆಗೊಲಿವುದು.

ಜೀವಿಗಳಲಿ ಭೇದವಿರದೆ
ಪೊರೆವ ಸುಖವಿಲಾಸಿನೀ,
ಕಾಡು ಮೇಡುಗಳನು ಬಿಡದೆ
ಮೋಹಿಪ ತಮ ಮೋಹಿನೀ,
ಹೇ! ಸುಶೀಲ ಶಾರ್ವರೀ!–ಸರಿ
ಯಾರು ನಿನಗೆ ಸುಂದರೀ!

---

# ಲಾಲಬಾಗಿನ ಬಂಡೆಯ ಮೇಲೆ

ಸಂಜೆಗೆಂಪು ಸುತ್ತಲೆತ್ತ
ಸುತ್ತಿ ಬಾನ ಮೆರೆಸಲು
ಅಸ್ತಗಿರಿಯನಾಶಿಸುತ್ತ
ತರಣಿ ದೂರ ನಡೆಯಲು
ಜನಗಳೆಲ್ಲ ನಗೆಯ ಚೆಲ್ಲಿ
ಹಸುರುಗಿಡದ ನೆರಳಿನಲ್ಲಿ
ನಡೆದು ನಡೆದು ಬರುವರಿಲ್ಲಿ
ತಮ್ಮ ಕಾಲ ಕಳೆಯಲು.

ಪ್ರಾಣಮಿತ್ರ, ನೀನು ಬಾರ
ನಾವು ಗಿರಿಯನೇರುವ.
ನೇಸರುರುಳಿ ಥಳಿಸೆ ದೂರ
ಬೈಗನೊಲಿಸಿ ನಲಿಯುವ.
ಉಸಿರನೆಳೆದು ಸುಳಿಯೆ ಗಾಳಿ
ನಿಲ್ಲದಲೆಯೆ ಮುಗಿಲಿನೋಳಿ
ಮೈಯ ಮರೆತು ಮುದವ ತಾಳಿ
ಕೂಡಿ, ಹಾಡಿ, ಮೆರೆಯುವ.

ಗಿರಿಯ ಸುತ್ತ ಹೂಗಳರಳಿ
ಮುದವ ಬೀರುತಿರುವುವು.
ಸಂಜೆ ರವಿಗೆ ಮುಗಿಲ ಸುರುಳಿ
ಸುತ್ತಿ ಬೆಳಗುತಿರುವುವು.

ಎಳೆಯ ಕೊರಲನಣಿಯ ಮಾಡಿ
ಖಗಗಳೆಲ್ಲ ಮೇಲೆ ಕೂಡಿ
ಮಧುರ ಗೀತಗಳನು ಹಾಡಿ
ಸೂರೆಗೊಳುತಲಿರುವುವು.

ಪರ್ವತ, ನದಿ ಚಿಗುರುಗಳಲಿ
ಮೆರೆವ ಸೃಷ್ಟಿಮಂದಿರ,
ಬೆಳಗು, ಬೈಗು, ವೇಳೆಗಳಲಿ,
ಆಹ! ಎನಿತು ಸುಂದರ!
ಪ್ರಾಣಮಿತ್ರ, ಅದೋ ನೋಡು,
ದೂರ, ಹಳೆಯ ಹಳ್ಳಿಗಾಡು
ಇತ್ತ ಬೆಂಗಳೂರು ನಾಡು
ಮೇಲೆ ಎಳೆಯ ಚಂದಿರ!

ಹಸುರ ನಡುವೆ ಮೆರೆವ ಗಿರಿಯೆ
ನೀನು ಬೈಗನೊಲಿವೆಯ?
ಸಂಜೆವೆಣ್ಣು ಸಿರಿಯ ಕವಿಯೆ
ಅವಳನೊಲಿದು ತಣಿವೆಯ?
ಕಾಲ ಕಳೆಯೆ ಜನರು ಬರಲು
ಹಾಡನುಲಿಯೆ ಹಕ್ಕಿಗೊರಲು
ಜೀವ ತಳೆದು ತನುಮನದಲಿ
ಅವರ ಕೂಡಿ ನಲಿವೆಯ?

ಅದೋ, ಎದೆಯ ಗೆಳೆಯ ನೋಡು
ಸಂಜೆಯೆಂತು ಮೆರೆದಿದೆ!
ಕೆಂಪು, ಹಸುರ, ತಳಿರ ಬೀಡು
ಸೊಬಗಿನೊಳಗೆ ತೇಲಿದೆ!

ಸೃಷ್ಟಿದೇವಿ ಮುದವ ತಳೆದು
ಬೈಗಿನೊಡನೆ ಬಾಳಹೊಸೆದು
ನಲಿಯೆ, ವಿಶ್ವವೀಣೆ ಮಿಡಿದು
ಮನಕೆ ಶಾಂತಿಸಾರಿದೆ !

---

# ಹೊಸ ಹೊಸಲು

ಹದಿನೈದು ವರುಷಗಳೆ ಹಿಂದು ಹಿಂದಕೆ ಸರಿದು
ಬಲು ದೂರವಾಗಿಹುದು ಹಳೆಯ ಹೊಸಲು!
ಹಿಂದೊಮ್ಮೆ, ಜಗದೆಡೆಗೆ ಬಾ, ಎಂದು ಬಳಿಗರೆದು
ಬೀಳುತಿಹುದಿಂದದರ ಕಡೆಯ ನೆಳಲು!
ನನ್ನ ಮುಂಭಾಗದಲಿ ಕಾಣುತಿದೆ
ಮತ್ತೊಂದು ಹೊಸಹೊಸಲ ಬೆಳಸು.
ನನಗೆ ದಾರಿಯ ಬಿಡಿಸಿ ಕರೆಯುತಿದೆ
ಅಡಿಯಿಡಲು ಹೆದರುತಿದೆ ಮನಸು.

ಸಂಜೆ ಸೊಗಸಿನ ಸೊಗಸು, ದಿನದ ಮೊದಲಿನ ಶಾಂತಿ,
ಚೈತ್ರ ಚಿತ್ರಿಸಿಹ ಚಿತ್ರಗಳ ಚೆಲುವು
ನುಣ್ಗೊರಲ ಸವಿ, ಹುಣ್ಣಿಮೆಯ ಹೊಂಬೆಳಕ ಕಾಂತಿ
ಎಲ್ಲವೀ ತಾಣದಲಿ ತೋರಿಬಹವು.
ಇಂದೇನು! ಹೀಗೇಕೆ ತೋರುತಿದೆ?
ಆಶ್ಚರ್ಯಗೊಳಿಸುತಿಹ ನೋಟ!
ಆಶೆನದಿ ಹರಿದು ದಡ ದಾಟುತಿದೆ
ಓಡುತಿದೆ, ಇದು ಯಾವ ಮಾಟ!

ಶೃಂಗಾರರಂಗವನು ನಾನೊಲಿದು ಬಳಿನಿಂದು
ಅಡಿಯಿಟ್ಟು ಹೊಸಹೊಸಲ ತುಳಿವ ಮುನ್ನ
ಬಿಂಕ, ಬಿನ್ನಾಣ, ಮದ, ಮಾತ್ಸರ್ಯಗಳು ಬಂದು
ಬಿಗಿದು ಬಂಧಿಸಲು ಬಳಸಿಹವು ನನ್ನ.

ನೂರಾರು ಲಲನೆಯರ ಚೆಲುವಿನಲಿ
ಕಡೆಗಣ್ಣನೆಳೆನೋಟ ಬೆರೆತು
ಎದೆಯೊಲವು ವಿವಿಧ ಆಕಾಂಕ್ಷೆಯಲಿ
ಕೊನೆಗಾಣದಿದೆ ನೆಲೆಯನರಿತು.

ಬಾ, ಎಂದು ಕರೆಯುತಿಹ ಬಾಗಿಲಿನ ಕಡೆಯಿಂದ
ಯೌವನದ ಗಾಳಿ ಬೀಸುತಿದೆ ಬಳಿಗೆ.
ಆಹ! ಇದು ಯೌವನದ ನೆಲೆವೀಡು, ಏನಂದ!
ಬೆಳಕ ಸಿರಿ ತುಂಬಿಹುದು ಗುಡಿಯ ಒಳಗೆ.
ಇದನುಳಿದು ಹಿಂದೆಗೆದು ಹಿಂದುಳಿಯೆ
ಬೇರಾವುದೂ ಮಾರ್ಗವಿರದು
ತಡೆಯೇಕೆ? ಹೊತ್ತೇಕೆ? ಮನ ನಲಿಯೆ
ಬೇಗನಡಿಯೆತ್ತಿಡುವೆ ಒಲಿದು.

---

## ಎಷ್ಟು ಜನ ಚಂದಿರರು?

ಎಷ್ಟು ಜನ ಚಂದಿರರು
  ಅಲೆಯುವರು ಮೇಲೆ?
ಯಾರಿವರ ಕಳುಹುವರು
  ಏನಿವರ ಲೀಲೆ?

ಒಮ್ಮೊಮ್ಮೆ ಬಲು ಕುಗ್ಗಿ
ಮತ್ತೊಮ್ಮೆ ಬಲು ಹಿಗ್ಗಿ
ದಿಕ್ತಟದ ಹೊರನುಗ್ಗಿ
  ಮೆಲುಮೆಲನೆ ನಡೆದು,
ಮುಗಿಲುಗಳ ಮುದ್ದಾಡಿ
ಶಾಂತಿಯನು ಒಡಗೂಡಿ
ತೇಲಿಬಹರೀಜಾಡಿ
  ಬೆಳಕ ಮಳೆ ಕರೆದು.

ಚುಕ್ಕೆಗಳು ಕಣ್‌ಬಿಟ್ಟು
  ರಾತ್ರಿಯಲಿ ಮಿನುಗೆ
ಬಾಂದಳದ ಒಳಗುಟ್ಟು
  ಒಡೆಯುವುದು ಇಳೆಗೆ.
ಮೂರ್ಛೆಯಲಿ ಮಲಗಿಹುದು
  ಸುಡುವ ಸುಡುಗಾಡು
ಮೌನವನು ಧರಿಸಿಹುದು
  ಬನ, ಬೀಡು, ಕಾಡು.

ಕತ್ತಲೆಗೆ ಮನವೊಪ್ಪಿ
ನಿದ್ರೆಯನು ಜನರಪ್ಪಿ
ಮಲಗಿರಲು ಗುರಿತಪ್ಪಿ
ಬೆಳಕೇಕೆ ಈಗ?
ಭೂತಗಳು ಬಾಯ್ತೆರೆದು
ತಾರೆಗಳ ಸದೆಬಡಿದು
ನಿಮ್ಮೊಡಲ ಸುಧೆ ಸವಿದು
ನಲಿಯಬಹುದೀಗ.

ಚಂದಿರರೆ! ಸುಂದರರೆ!
ಮನೆಯ ಕಡೆ ತೆರಳಿ.
ನಿಮಗಾಗಿ ಮನಬೆದರೆ
ನನಗಾಗಿ ತೆರಳಿ!

---

# ಹಸುರು

ಹಸುರ ಹೆಸರೆತ್ತಿದರೆ ಹೊಸಹರುಷ
ಹೊಮ್ಮುವುದು ಮೈತುಂಬ ತುಂಬಿ!
ನಾಲ್ಕುಕಡೆ ನೋಡುತಿರೆ ಪ್ರತಿನಿಮಿಷ
ಉಬ್ಬುವುದು ಎದೆ ಅದನೆ ನಂಬಿ!
ಸುಂದರ ವಸುಂಧರೆಯ ಸಿರಿಯೆಲ್ಲ
ಬಗೆಬಗೆಯ ಹಸುರಿನಲಿ ಬೆರೆತು
ನಲ್ಮೆಯನು ಸುರಿದಿಹುದು ಜಗಕೆಲ್ಲ
ಶಾಂತಿ, ಸೌಭಾಗ್ಯಗಳ ಹೊಸೆತು.
ಹಸುರ ಹೊರೆ ಹೊತ್ತಿರುವ ಬನ, ಬಯಲ
ಮಡಲಿನಲಿ ಮಲಗಿಹುದು ಚೆಲುವು.
ಕಣ್ತುಂಬ ಕಂಡೊಡನೆ ಹಸುರ ನೆಲ-
ದಿಂದೆದ್ದು ನಿಲ್ಲುವುದು ಸೊಗವು!
—ವರುಷಗಳ ಹರುಷ ಸಿರಿ ಬೆಳೆದು
ಹಸುರಿನಾಳದಲಿ ಹುದುಗಿಹುದು!
ಭೂದೇವಿ ಮೆಚ್ಚಿರುವ ಹಸುರೆ!
ಮುದವನೀವುದು ನಿನ್ನ ಹೆಸರೆ!

---

# ಪ್ರೇಮದರ್ಶನ

ವರುಷವರುಷಗಳಲಿ ಬೆಳೆದು
ಹೃದಯನಿಲಯ ಬೆಳಗಲು
ಯೌವನ ಸಿಂಗಾರಿ ಒಲಿದು
ಕಳೆಯ ಸಿರಿಯ ಮುಡಿಸಲು
ಒಲವಿನಂಚು ಮಿಂಚಿತು—ಚೈ
ತನ್ಯ ಧನ್ಯವಾಯಿತು!
ಪ್ರೀತಿಲತೆಯ ಕುಡಿಯು ಮೊಳೆತು
ಪ್ರೇಮದಲರನರಳಿಸೆ,
ನೇಹ ಮೋಹಗಳಲಿ ಬೆರೆತು
ಬಯಕೆ ಬಲಿತು ಬಾಧಿಸೆ,
ಜೀವ ಸುಖವಿಲಾಸಕೆ,—ಕೈ
ನೀಡುತಿಹುದು ಪ್ರಣಯಕೆ!

ಬಳಲಿದವರ ಎದೆಯ ತಟ್ಟಿ
ರಜನಿ ಜನನಿ ಮೆರೆದಿರೆ,
ಕನಸುಗಳಾ ಮಾಲೆ ಕಟ್ಟಿ
ನಿದ್ದೆವೆಣ್ಣು ಚಲಿಸಿರೆ,
ಪ್ರೇಮವಲ್ಲಿ ಬಿರಿವುದು—ವೈ
ಯಾರದಿಂದ ಸುಳಿವುದು!
ಮೃದು ನಿನಾದದಲೆಗಳಲ್ಲಿ
ಹೃದಯವೆದ್ದು ಕುಣಿಯಲು,
ಕಷ್ಟ, ಕಡು ನಿರಾಶೆಯಲ್ಲಿ

ನೊಂದ ಬಾಳು ಸುಖಿಸಲು,
ಒಲುಮೆ ನಲ್ಮೆರೂಪದಿ—ವ್ಯೈ
ದೋರಿಬಹುದು ಸರಸದಿ!

ಸೊಬಗಿನೆಳೆಯು ಮುಸುಕ ಹೊದ್ದು
ಕುಸುಮಭರಿತ ವನದಲಿ
ಸದ್ದುಮಾಡದಂತೆ ಎದ್ದು
ಸಕಲ ಜನರ ಮನದಲಿ
ಪ್ರೇಮುದರಸಿ ಬಿಂಬಿಸಿ—ಸಂ
ಶೋಭಿಪಳು ವಿರಾಜಿಸಿ!
ಒಲುಮೆವೆಣ್ಣು ಮಳೆಯ ಬಿಲ್ಲ
ಬಣ್ಣದುಡುಗೆ ಬೆಡಗಲಿ
ಸಂಜೆವೆಣ್ಣ ಸೊಬಗನೆಲ್ಲ
ತಳೆದು ಶಾಂತಿ ಮಡಿಲಲಿ
ತೇಲಿ ತೇಲಿ ಬರುವಳು—ಸೌಂ
ದರ್ಯವಾಗಿ ಕಾಂಬಳು!

ಪ್ರೇಮರಾಜ್ಞಿ! ಎತ್ತಲಿಂದ
ತಿಳಿಯದಂತೆ ಬಂದೆಯೋ,
ಎಂದು ಎದೆಯ ತಡಿಯ ಮಂದ
ಹಾಸದಿಂದ ತುಳಿದೆಯೋ,
ಮನವು ನಿನಗೆ ಒಲಿಯಿತು—ವೈ
ರಾಗ್ಯ ಸೋತು ಕುಗ್ಗಿತು!
ಸಗ್ಗದಮಲ ಪದಕೆ ಸಮವು
ನಿನ್ನ ಮೊದಲ ದರ್ಶನ!

ಹೂವಿನಂತೆ ಸತತ ಹಿತವು
ನಿನ್ನ ಬಾಹುಸ್ಪರ್ಶನ!
ಹೇ, ತ್ರಿಲೋಕಮಾನಿನೀ!—ಕಾ
ಪಾಡು ಕೃಪಾಪಾಲಿನೀ!

---

# ಸಂಜೆಮಲ್ಲಿಗೆ

ಸಂಜೆಸಮಯಕೆ ಸಂಜೆಮಲ್ಲಿಗೆ
ಅರಳಿ ನಿಂತಿವೆ ಬನದಲ್ಲಿ
ಹಸುರ ಬಳಸಿನ ನೆಳಲಲಿ!
ಬೀಸಿ ಬರುತಿಹ ಗಾಳಿಯೊಂದಿಗೆ
ಮಾತನಾಡುತ ಆಡುತ
ತೂಗುತಿರುವುವು ಬಾಗುತ!

ಸುಮದ ಚೆಲುವಿನ ರೂಪ ನೋಡಲು
ಇಹುದು ತುತ್ತುರಿಯಂದದಿ
ಕೊಂಬು ಕಹಳೆಯ ಚೆಂದದಿ!
ಅಲೆವ ಜನಗಳು ಬಳಿಗೆ ಸಾರಲು
ಕೂಗಿ ಕರೆವುವು ಕುಣಿಯುತ
ಶಾಂತಿ, ಕಾಂತಿಯ, ಬೀರುತ!

ತಿರೆಯ ಕೆಳಗಿನ ಸಿರಿಯ ಪರಿಯನು
ನಮಗೆ ಹೇಳುತಲಿರುವಿರ?
ಜಗವ ನೋಡಲು ಬಂದಿರ?
ಧರಣಿ ರಮಣಿಯ ಒಲುಮೆ ನುಡಿಯನು
ಸಾರುತಿರುವಿರ ಕುವರರ?
ರವಿಯ ಬೀಳ್ಕೊಡೆ ಬಂದಿರ?

ಏನು ನುಡಿವಿರೊ ಯಾರು ಬಲ್ಲರು
ಸುಮದ ಹೃದಯದ ಬಗೆಯನು
ನಿಮ್ಮ ನುಡಿಗಳ ಗುಟ್ಟನು?

ಜನರು ಚೆಲುವನು ಸವಿಯಬಲ್ಲರು
ಕಷ್ಟನಷ್ಟವ ನೆನೆವರೆ?
ಕಣ್ಣಹನಿಯನು ಕರೆವರೆ?

ಸೊಬಗ ವೈಭವವನ್ನು ಸಾರುವ
ಬಣ್ಣಬಣ್ಣದ ಹೂಗಳೆ!
ಭೂಮಿದೇವಿಯ ಮಕ್ಕಳೆ!
ಕಣ್ಣು ಮನಗಳ ತೃಪ್ತಿಗೊಳಿಸುವ
ನೀವು ನಲ್ಮೆಯ ಕುಡಿಗಳು!
ಪ್ರೇಮದೇವಿಯ ಗುಡಿಗಳು!

ಸಂಜೆಮಲ್ಲಿಗೆ ಹೂವಿನಂತೆಯೆ
ಸಂಜೆಸಹಿತವು ಹಿತಕರ
ಶಾಂತಿ ತಾಳಲು ದಿನಕರ!
ಸುತ್ತುಮುತ್ತಲು ಎಲ್ಲೆ ಎಲ್ಲೆಯೆ
ವಿವಿಧ ವರ್ಣದಿ ಬೆಳಗಿವೆ
ಸಂಜೆ ಬಣ್ಣದ ಹಬ್ಬವೆ?

---

# ಸಮೀರ ಸಮಾಗಮ

ಬಾರಾ, ತೆಂಕಣದಿಶೆಯ ಸಮೀರ
ನವಚೇತನವೀಯುವ, ಹರಿಕಾರ!

ಸಂತಸ ಸುರಿಯಲು ಧವಳ ತುಷಾರ
  ರೋದನಗೈವುದು ಕೊರೆವ ಚಳಿ.
ಮಾಗಿಯ ಮಡಿಲಲಿ ಮುದಿ ಅವತಾರ
  ಸಂದಿರೆ, ಕಾದಿಹೆ ಕಣಿವೆ ಬಳಿ.
ಕಳೆಗುಂದಿರುವುದು ನನ್ನ ಶರೀರ,
  ಬಾರಾ, ತೆಂಕಣದಿಶೆಯ ಸಮೀರ
    ನವಚೇತನವೀಯುವ, ಹರಿಕಾರ!

ನಿನ್ನಯ ಸುಖ ಸಂಸ್ಪರ್ಶನದಲ್ಲಿ
  ಮರಳಿ ವಿರಾಜಿಸೆ ನನ್ನ ಸಿರಿ
ಖಗಕುಲ ಗಾನಾಮೃತವನು ಚೆಲ್ಲಿ
  ಎಚ್ಚರಗೊಂಬುದು ಗರಿಗೆದರಿ.
ತುಳುಕಾಡುವುದೈ ವಿಪಿನ ವಿಹಾರ
  ನವಚೇತನವೀಯುವ, ಹರಿಕಾರ
    ಬಾರಾ, ತೆಂಕಣದಿಶೆಯ ಸಮೀರ!

ನಿನ್ನಾ ಮೃದುಪದ ತಾನವ ಬಲ್ಲೆ
  ಎಂದಿಗೆ ಬರುವೆಯೊ, ನಾನರಿಯೆ,

ಕೋರಿಕೆ ಸಲ್ಲುವವರೆಗೂ ಇಲ್ಲೆ
ಕಾಯುವೆ ಕದಲದೆ ನಾ, ಮರೆಯೆ,
ನವಋತು ಸಮ್ಮೋಹನ ಸಿಂಗಾರ,
ಬಾರಾ, ತೆಂಕಣದಿಶೆಯ ಸಮೀರ
ನವಚೇತನವೀಯುವ, ಹರಿಕಾರ!

ಮಾಗಿಯ ಜೊತೆಯಲಿ ನೀ ಕಾದಾಡಿ
ಗಾಢಸುಷುಪ್ತಿಯ ಸೆರೆ ಬಿಡಿಸೆ,
ಗಿರಿ, ನದಿ, ಗ್ರಹಗಳು ಒಂದೊಡಗೂಡಿ
ಚುಂಬಿಸಿ ಸುಖವನು ಅನುಭವಿಸೆ,
ಅಳಿವುದು ಸಾಸಿರ ಚಿಂತೆಯ ಭಾರ,
ನವಚೇತನವೀಯುವ, ಹರಿಕಾರ
ಬಾರಾ, ತೆಂಕಣದಿಶೆಯ ಸಮೀರ!

ಮುಗಿಲ ವಿಮಾನದಿ ದಿಕ್ತಟದಿಂದ
ತೇಲುತ ಬರೆ ನೀ, ನನ್ನೆಡೆಗೆ
ಜೋಗುಳ ಪಾಡಲು ಸಂತಸದಿಂದ
ಕಣ್ತೆರೆಯುವುದೈ ತಳಿರೊಸಗೆ!
ಉಕ್ಕುತ ಹರಿವುದು ಜೀವನ ಸಾರ
ಬಾರಾ, ತೆಂಕಣದಿಶೆಯ ಸಮೀರ
ನವಚೇತನವೀಯುವ, ಹರಿಕಾರ!

ಕಿಸಲಯ ರಂಜಿತ ಬನ ಸಂಚಾರಿ!
ಏಕೆ ವಿಳಂಬವು ಬಾ, ಬೇಗ!
ಸುಖದ ಮಹತ್ವವ ಸುತ್ತಲು ಸಾರಿ
ನೀ, ಬರೆ ಮೊಳೆವುದು ಅನುರಾಗ!

ಸಕಲ ಸಜೀವಿ ಸಹೋದರ, ಬಾರ,
ನವಚೇತನವೀಯುವ, ಹರಿಕಾರ
ಬಾರಾ, ತೆಂಕಣದಿಶೆಯ ಸಮೀರ!

ಬಾರಾ, ತೆಂಕಣದಿಶೆಯ ಸಮೀರ
ನವಚೇತನವೀಯುವ, ಹರಿಕಾರ!

---

# ಹೆಣ್ಣಿಗೆ

ಕಣ್ಮುಂದೆ ಸುಳಿಯದಿರು
ಎಲೆ ಚೆಲುವೆ ಹೆಣ್ಣೆ!
ಸುಳಿದು ಮನ ಕಲಕದಿರು
ಬೇಡುವೆನು ಹೆಣ್ಣೆ!
ಪ್ರೇಮದಾ ಮೊಟ್ಟಮೊದಲಿನ ನೋಟ
ಈಗ ತಾ, ಸಾರಿಹುದು ಬಳಿಗೆ,
ಹಿಂದಿನಾ ಹುಡುಗಾಟ ಚೆಲ್ಲಾಟ
ಅಳಿದಿಲ್ಲ, ಉಳಿದಿಹುದು ಒಳಗೆ!

ಹೊಸಬಾಳಿನೊಡಗೂಡಿ
ಬಯಕೆ ಹೆಚ್ಚುವುದು.
ಬಿಸಿರಕುತ ಹರಿದಾಡಿ
ಎದೆ ಮಿಡಿಯುತಿಹುದು.
ಆಲೋಚನೆಯ ಪರಿಯು ಇನಿತಿಲ್ಲ
ಆತುರವು ಸೆಳೆಯುತಿದೆ ಎನ್ನ.
ಕೆಡಕು, ಕೀರ್ತಿಗಳ ಅಂತರವಿಲ್ಲ
ಭಯವಿಲ್ಲ, ಕೆಣಕದಿರು ಎನ್ನ!

ಹೊಸ ಬಗೆಯ ಅನುರಾಗ
ಇಬ್ಬರಲಿ ಬೆಳೆದು,
ಮೆಲುಮೆಲನೆ ಹೊಸ ಭೋಗ
ದಾಸರೆಗೆ ಸೆಳೆದು,

ಕಾಡುತಿದೆ, ನಕ್ಕು ನಲಿಯುತಿದೆ ನಿಂದು
ತಪ್ಪಿದರೆ ಆಹುತಿಗೆ ಕೊಡಲು.
ಎಲ್ಲ ಅಸ್ಪಷ್ಟವಾಗಿಹುದಿಂದು
ಕಣ್ಗೆ ಕಾಣುವುದು ಬರಿ ನೆಳಲು!

ಇಂದಿನಾ ಒಲುಮೆಯನು
ಎದೆಯೊಳಗೆ ಬೆಳೆಸಿ
ಆಶೆ, ಆಕಾಂಕ್ಷೆಯನು
ತಡೆಗಟ್ಟಿ ನಿಲಿಸಿ,
ಹುಲುಸಾದ ಬೆಳೆಬಂದು ತೂಗುತಿರೆ
ಎಲ್ಲರೆದುರಲ್ಲಿ ಕೈ ಹಿಡಿದು
ಕನಸು ನನಸಾಗುತಿರೆ, ಫಲಿಸುತಿರೆ
ಹೃದಯ ಹಿಗ್ಗುವುದು ಮೆರೆಮೆರೆದು!

ನಿತ್ಯ ನಾವ್ಗಳು ಕೂಡಿ
ಬಾಳ್ಗೆ ಸಿರಿ ಮುಡಿಸಿ,
ಒಂದೆ ಹಾಡನು ಹಾಡಿ
ಪ್ರೇಮವನು ನುತಿಸಿ,
ನಿತ್ಯಪೂಜೆಯ ಕಾಣ್ಕೆಯನು ನೀಡಿ
ನಲ್ಮೆ ತೆರೆ ಮಾಲೆಯಲಿ ಮೆರೆಯೆ,
ನೂರು ಕಣ್ಣುಗಳು ನಮ್ಮನೆ ನೋಡಿ
ಹೊಗಳಿ ಪಾಡುವುವು – ನೀನರಿಯೆ!

ದುಡುಕಿ, ನೀ, ಕೆಡಬೇಡ
ಎದುರು ಬಾರದಿರು!
ಕೆಟ್ಟು ದೂಷಿಸಬೇಡ
ಬಳಲಿ ಬಾಡದಿರು!

ನವಯೌವನದ ಬಿರುಸು ಬಿಂಕದಲಿ
ಒಲುಮೆವೆಣ್ಣಿನ ಬಲೆಯು ಸೆರೆಯು!
ಇದೆ ಪ್ರೇಮ ಮುಂದಿನಾ ದಿನಗಳಲಿ
ಸತ್ಸಂಗದಲಿ ಮೊಳೆವ ಸಿರಿಯು!

ನೀತಿ, ನೇಮದ ಕಟ್ಟು
ಸುತ್ತುಗಟ್ಟಿಹುದು!
ಭೀತಿ ಭೂತದ ಸಿಟ್ಟು
ನುಂಗಿ ನೊಣೆಯುವುದು.
ಕದ್ದು ನಲಿಯುವ ಪ್ರೇಮವನು ಬಿಡು
ಅಪವಾದ ಹಿಂದು ಮುಂದಿಹುದು;
ಹಗಲಿರುಳು ನಿಶ್ಚಲತೆಯನು ತೊಡು
ಸೊಗದ ಸುಗ್ಗಿಯು ತಡೆದು ಬಹುದು!

ಮುಂದೆ ನಮಗಾಗಿರುವ
ವೈಭವವ ನೆನೆದು
ಇಂದು ಮುಂಬರುತಿರುವ
ಆಶೆಗಳ ಹಿಡಿದು
ಮುಂದು ಮುಂದಕೆ ಸಾಗು ಎಲೆ ಜೀವ,
ಸ್ಥೈರ್ಯದಾಶ್ರಯವ ಮರೆಹೊಗುತ!
ಈ ಒಂದು ಅಧಿಕಾರ ಕೊಡು ದೇವ
ಬದುಕಿ ಬಾಳುವೆನು ಅನವರತ!

---

# ಸಂಜೆಮಳೆ

ಒಂದು ಚಣದ ಸಂಜೆಮಳೆ
ಬೀಳಲಿಂದು ತೋಯಲಿಳೆ
ಹೂವ ಬಿಸಿಲು ಬೆಳಕುಗೊಳೆ
ಏನು ಆನಂದವೋ!
ಏನು ಆನಂದವೋ!

ಕಿರಿಯ ಹಿರಿಯ ಮುಗಿಲ ಪಡೆ
ನೀರನೆರೆಯೆ ಎಲ್ಲ ಕಡೆ
ಬಲು ಪವಿತ್ರವಾಗಲೆಡೆ
ಏನು ಆನಂದವೋ!
ಏನು ಆನಂದವೋ!

ಮಿನುಗೆ, ಜಿನುಗೆ, ಬೆಳಗೆ ಗಿರಿ
ಉರುಳಿ ಹೊರಳಿ ನೊರೆಯೆ ಝರಿ
ನಲಿಯೆ ಮೆರೆಯೆ ಹಸುರ ಸಿರಿ
ಏನು ಆನಂದವೋ!
ಏನು ಆನಂದವೋ!

ಬೆಳೆಯಲೆಳೆಯ ಮನದ ತೆನೆ
ಪೂತು ಚಿಗಿಯಲದರ ಕೊನೆ
ಅರಳುತಿಹುದು ಬಯಕೆ ನನೆ
ಏನು ಆನಂದವೋ!
ಏನು ಆನಂದವೋ!

ಗಾಳಿ ಮೆಲನೆ ಸುಳಿಯುತಿರೆ
ಮಳೆಯ ಬಿಲ್ಲು ರಂಜಿಸಿರೆ
ಮರಳಿ ವಿಹಗ ನುತಿಸುತಿರೆ
ಏನು ಆನಂದವೋ!
ಏನು ಆನಂದವೋ!

ಬುವಿಯು ಬಾನು ಮುದದ ನೆಲೆ!
ಮೂಡಿ ಬರುವ ವಿವಿಧ ಕಲೆ
ನನ್ನ ಮನವ ಪಿಡಿವ ಬಲೆ!
ಏನು ಆನಂದವೋ!
ಏನು ಆನಂದವೋ!

---

# ಸಮಾಧಾನ

ಕಣ್ಣನೀರ ಸುರಿಸದಿರು
  ಕಂದ ಕಣ್ಣಮುಚ್ಚಲು.
ಅತ್ತು ಕೊರಗಿ ಸೊರಗದಿರು
  ವಿರಹ ತಾಪ ಹೆಚ್ಚಲು.

ಏಳೆಯ ಕಂದ, ದೂರದಲಿ
ಭಯವ ಬಿಟ್ಟು, ಸಾವಿನಲಿ
ಕದನವಗೈವ ಹುಟ್ಟುಗಲಿ
  ಎಂದು ತಿಳಿ, ತಾಯಿಯೆ!

ದಿನವು ದಿನವು ದೇವನಲಿ
ನಿನ್ನಿ ವಿಶಾಸಲಿರಿಸುತಲಿ
ಹರಕೆಗಳನು ಬೇಡುತಲಿ
  ಬದುಕಿ ಬಾಳು ತರಳೆಯೆ!

ಭಕುತಿಯೊಡನೆ ಬಯಕೆಗಳು
  ಹೊಂದಿಕೊಂಡು ಬೆಳೆಯಲಿ
ನಿನ್ನ ಧೈರ್ಯ ಸ್ಥೈರ್ಯಗಳು
  ದೇವನೆದೆಯ ಒಲಿಸಲಿ.

ಒಮ್ಮೆ, ಮನದ ಮುಸುಕಿನೊಳು
ಒಮ್ಮೆ, ಕನಸ ನೆಳಲಿನೊಳು
ಕಡೆಗೆ ಮಡಿಲ ಕಡಲಿನೊಳು
  ನಿನ್ನ ಕಂದ ಸುಳಿವನು!

ನಭದ ತಾರೆ ಬೀಳುವೊಲು
ಬಳ್ಳಿಮಿಂಚು ಮಿಂಚುವೊಲು
ನಿನ್ನ ಕಂದ ಅರಿಯದೊಲು
ಬಳಿಗೆ ಬಂದೆ ಬರುವನು !

ಪ್ರೀತಿ, ಪ್ರೇಮದೆದುರಿನಲಿ
ಸಾವು ನಿಲ್ಲಲಾರದು !
ನೆನಪು ಕುರುಹಿನೆದುರಿನಲಿ
ಕಾಲ ಗೆಲ್ಲಲಾಗದು !

---

# ಕಂಬನಿ

ಓ, ತಾಯಿ! ದಿನದಿನಕೆ ಅಗಲಿಕೆಯ
ಸಂಕಟವು ದಹಿಸುತಿದೆ ಹೆಚ್ಚಿ!
ಕಳೆದ ಬಾಲ್ಯದ ಬೆಡಗಿನೈಸಿರಿಯ
ನೆನಪು ತಾ, ತೋರುತಿದೆ ಬಿಚ್ಚಿ!

ನಿನ್ನ ದೂರದ ನುಡಿಯ ಆಲಿಸಲು
ಹಿರಿಮೌನದಾಳದಲಿ ಮುಳುಗಿ,
ಮೈಮರೆತು ನಿನ್ನನೇ ಧ್ಯಾನಿಸಲು
ಕಾಣದಿರೆ ತೆರಳಿದೆನು ಮರುಗಿ.

ನಿನಗಾಗಿ ನಿದ್ದೆಗಡಲಲ್ಲಿ ಈಸಿ
ಸ್ವಪ್ನಸಾಮ್ರಾಜ್ಯದೆಡೆ ನಡೆದು,
ಆತುರದಿ ಹಾತೊರೆದು ಹಾರೈಸಿ
ಹುಡುಕಿದೆನು ಅಲ್ಲೆಲ್ಲ ಅಲೆದು.

ನೂರು ಬಗೆ ಎಳೆತನದ ಯತ್ನಗಳು
ಫಲಿಸದಿರೆ ಕಂಬನಿಗಳುದುರಿ
ನಿಟ್ಟುಸಿರ ಬೇಗೆಯಲಿ ಬಯಕೆಗಳು
ಬತ್ತಿದುವು ಎದೆನಡುಗಿ ಬೆದರಿ.

ಅಮ್ಮ! ಒಂದೊಂದು ಕಂಬನಿಯೊಳಗೆ
  ನೂರು ದಿನಗಳ ನೋವು ಹುದುಗೆ
ತಬ್ಬಲಿಯ ನುಡಿ ತಾಗಿರುವವರೆಗೆ
  ಏನಿದ್ದರೇನು ಫಲ ನನಗೆ!

---

# ತಪ್ಪೇನು ?

ತಪ್ಪೇನು ? ತಪ್ಪೇನು ?
  ನಿಜವ ನುಡಿದೆ.
ತಪ್ಪೇನು ? ನಿಜ, ನಾನು
  ಗುಟ್ಟನೊಡೆದೆ.
ಎದೆಯ ಸಂತಾಪವನು
ಆಶೆಯ ನಿರಾಶೆಯನು
ಬಾಯ್ತೆರೆದು ಹೇಳಿದೆನು
  ಸುಡಲು ನುಡಿದೆ !

ನನ್ನ ಮನದಾತಂಕ
  ಚಿತೆಗು ಮಿಗಿಲು !
ಚಿಂತೆಯಾ ಪರ್ಯಂಕ
  ಮಲಗಿಕೊಳಲು !
ಹಗಲೇನು ? ಇರುಳೇನು ?
ಬುವಿಯೇನು ? ನಭವೇನು ?
ಎಲ್ಲ ಶೂನ್ಯವು ತಾನು
  ಅಳಲು ಕೊಳಲು.

ಬದುಕ ಬೆಳಸುವ ಒಲವು
  ಸಲ್ಲದಿರಲು,
ಉಳಿದಿರುವ ದಿನದಿನವು
  ನೋವ ಸರಲು !

ದುಃಖವು ನಿರಾಕಾರ!
ಅದರ ಹಾಹಾಕಾರ,
ಬಲು ಪೂರ! ಬಲು ಪೂರ!
ತಾಳದೊಡಲು!

ಹರೆಯ ಹೂಬಿಡುತಿರುವ
ಎದೆಯ ಒಳಗೆ
ಕಳರಂಗವನು ಜರೆವ
ನೋಟ ಬೆಳಗೆ,
ನಾ, ಸುಮ್ಮನಿರಲಹುದೆ?
ಕಣ್ಣೀರು ಬರದಿಹುದೆ?
ಮರುಕ ಹುದುಗಿರಲಹುದೆ?
ಆಗದೆ ನಗೆ!

ನೆನೆಪ ಸುತ್ತಿಗೆಯಿಂದು
ಎದೆಯ ಬಡಿಯೆ,
ಛಿಟಿ ಛಿಟಿಲು ಛಿಟಿಲೆಂದು
ದುಃಖ ಸಿಡಿಯೆ,
ಹುಬ್ಬು ಗಂಟಿಕ್ಕುವುದು
ಎಳೆಬಾಳು ಸೀಳುವುದು
ಅಮಿತ ಖತಿ ಕೆರಳುವುದು
ತಡೆಯಲರಿಯೆ!

ಬಾಳು ಗೀತವು ಎಂದು
ಕವಿ ನುಡಿವನು.
ಅಹುದು, ಇದು ದಿಟವೆಂದು
ತೋರಿಸುವೆನು.

ಬಯಕೆ ತುಂಬಿದ ಬಾಳು
ವೃದುಗಾನ, ನೀ, ಕೇಳು!
ಬಯಕೆ ತುಂಬದ ಬಾಳು
ಗೋಳ ಹದನು!

---

# ಹುಚ್ಚಿ

"ಅದೊ ಹುಚ್ಚಿ! ಇದೊ ಹುಚ್ಚಿ!" ಎನುತ ಕೂಗುತ ಜನರು
ಹೆಣ್ಣುಮಗಳೊಬ್ಬಳನು ಕಾಡುವರು ಸುತ್ತಿ.
ಅವಳ ಸಂಗಡ ಕೂಡಿ ಕೂಗುವರು, ಕುಣಿಯುವರು
ಗುರಿಯಿಟ್ಟು ಬಿಸುಡುವರು ಕಲ್ಲುಗಳ ಎತ್ತಿ.

ಹಣೆಗೆ ಕುಂಕುಮವಿಲ್ಲ, ತಾಳಿ, ಅರಿಸಿನವಿಲ್ಲ
ರಕುತ ಧಾರೆಯು ಹರಿವ ಕರೆಗಳನು ನೋಡು!
ಧೂಳಡರಿಹುದು ಕೆದರಿರುವ ಕುರುಲ ಮೇಲೆಲ್ಲ
ಕಣ್ಣುಗಳೊ, ಕಳೆಯುಳಿದ ಎಲುಬುಗಳ ಗೂಡು!

ಘನತೆ, ಗಾಂಭೀರ್ಯಗಳು, ಮಾನ, ಬಿಗುಮಾನಗಳು,
ತಿರೆಯ ಸಂಕೋಲೆಗಳು ಜಾರಿಹವು ಕಳಚಿ!
ಶೂನ್ಯದೊಂದಿಗೆ ನಿಂತು ಬಲು ಸರಸವಾಡುವಳು
ಬಾಂದಳವೆ ಬಿರಿಯುವೊಲು ಕೂಗುವಳು ಅರಚಿ!

ಅರರೆ! ಇದು ಸೋಜಿಗವು! ಎಲ್ಲರನು ನುಡಿಸುವಳು
ಜನರ ಮುಂಗಡೆ ನಿಂತು, ನಕ್ಕು ನಲಿಯುವಳು!
ಬೇಡದಿರೆ ಸಾರುವಳು, ತನ್ನ ತಾ ಮರೆತಿಹಳು,
ಊರೆಲ್ಲ ಪರಿಚಿತರು, ಎಲ್ಲ ಬಂಧುಗಳು!

ಜಗದಗಲ ಹರಡಿಹುದು ಇವಳೆದೆಯ ಅನುರಾಗ
ಏನು ಅದ್ಭುತ ಶಕ್ತಿ, ಬೈದರೂ ಹಿತವು!

ಮತಿಯಳಿದ ಬಾಳೆನಿತು ಹಗುರವಾಗಿಹುದೀಗ,
ನೈಜ ಬಲ್ಮೆಯ ಬಿಾರಿ ಬೆಳೆದಿಹುದು ಬಲವು!

ಕೊಲ್ಲದಿರಿ, ಮತಿಗೆಟ್ಟವಳ ಕೊಲ್ಲದಿರಿ ನೀವು,
ಬದುಕಿ ಬಾಳುವ ಬಾಳು ಸಡಿಲಿಹುದು ಇಂದು!
ಅವಳ ಸುಖ ದುಃಖಗಳ ಏನ ಬಲ್ಲೆವು ನಾವು
ದೂರವಿರಿ, ದೇವನೇ ಸಲಹುವನು ಬಂದು!

---

## ಜ್ವಾಲಾಮುಖಿ

ಹತ್ತಿರಕೆ ಸಾರದಿರು, ಕೆಣಕದಿರು,
   ನೊಂದಿರುವ ಮನುಜನನು ನೀನು.
ಚಿತ್ತ ನಿಶ್ಚಲವೆಂದು ಬಗೆಯದಿರು,
   ನಿರ್ಬಲನು ಎಂದರಿವೆಯೇನು?
ಕಣ್ಣಿನಾಳದ ಹೊಳಪು ಮಾಸಿಹುದು,
   ಬಾಯ್ತೆರೆದು ತಾ, ನುಡಿಯನಿವನು.
ರೂಪವೋ ಬಾಡಿ ಬಡವಾಗಿಹುದು
   ಮಳೆ, ಬಿಸಿಲ, ಲೆಕ್ಕಿಸನು, ಜಡನು!
      ಯಾವ ದುಃಖದ ಕಿಡಿಯೊ ಸಿಡಿದು
      ಸುಡುತಿಹುದು ನೊಂದೆದೆಯ ಮಿಡಿದು!
      ಮೇಲುಗಡೆ ಶಾಂತಿಯನು ಹೊದ್ದು
      ಎಂದೊ, ಸಿಡಿಯುವುದು ಸಿಡಿಮದ್ದು!

---

# ಭಿಕ್ಷೆ

ಕನಲಿ ಬೆದರಿಹೆ ಕೆಟ್ಟಕನಸಲಿ
ಯಾವುದೀ ಹೊಸಶಿಕ್ಷೆಯು?
ಚಿತ್ತ ಸಿಕ್ಕಿದೆ ಭಯದ ಸುಳಿಯಲಿ
ಏತಕೀ ಕಟು ಶಿಕ್ಷೆಯು?

ವಿರಹ, ನಿಷ್ಫಲ, ಅಳಲ ಹೊರೆಯಲಿ
ಕಂದಿ ಕುಂದಿದೆ ನನ್ನೆದೆ.
ಕ್ರೋಧ, ಮತ್ಸರ, ಭೇದ, ಹಗೆಯಲಿ
ಬದುಕು ಕೊರಗುತ ಕುಗ್ಗಿದೆ.

ಸತ್ಯಸಾರವನೆತ್ತಿ ತೋರುವ
ಹಗಲು ಬಹಳ ಕಠೋರವು!
ಇಹದೊಳಿದ್ದೇ ಬಾಳ ಮರೆಸುವ
ನಿದ್ರೆಲೋಕವೆ ವಂದ್ಯವು!

ನಿಶೆಸಹೋದರಿ! ನಿದ್ರೆದೇವಿಯೆ!
ಸಾಕು, ಕರುಣಿಸು ಪೋಷಿಸು.
ನಿನ್ನ ಬಾಗಿಲ ಹೊಸಲ ಬಳಿಯೇ
ಬಂದು ಕಾದಿಹೆ ರಕ್ಷಿಸು.

ಬಯಕೆ, ಬಳಲಿಕೆ, ಹರಕೆ ಕೋರಿಕೆ
ಎಲ್ಲ ಸಲ್ಲಲಿ ನಿನ್ನಲಿ.

ನಿನ್ನ ಬೆಚ್ಚನೆ ಮಡಿಲ ಹೊದ್ದಿಕೆ
ನಿತ್ಯ ಶಾಂತಿಯನೀಯಲಿ.

ಎದೆಯ ತಲ್ಲಣವಿನ್ನು ನಿಲ್ಲಲಿ
ಸಾಕು ಭೀಕರ ಶಿಕ್ಷೆಯು!
ಸೊಗದ ಕನಸಿನ ಸೋನೆ ಸುರಿಯಲಿ
ಇದುವೆ ನನ್ನೆದೆ ಭಿಕ್ಷೆಯು!

---

# ತಲ್ಲಣ

ಒಂದು ತಲ್ಲಣಕಿಂದು
  ಎನಿತೊಂದು ಬಲವು!
ವರುಷ ವರುಷವೆ ಇಂದು
  ಹಿಂದೆ ಸರಿದಿಹುವು
ಮಲೆನಾಡ ಮಡಿಲಲ್ಲಿ
ಬಂಧುಗಳ ಕೆಲದಲ್ಲಿ
ಜವಗೆ ಜೀವವ ತೆತ್ತು
  ಹಾ, ಹೋದಳವಳು!
ನವಮಾಸಗಳು ಹೊತ್ತು
  ನನ್ನ ಹೆತ್ತವಳು!

ಬಾ, ಚಿನ್ನ! ಬಾ, ಕಂದ!
  ಬಾ, ಎಂದು ಕರೆದು
ಮೇಲೆದ್ದು, ಮೆಲುಮೆಲನೆ
  ಹತ್ತಿರಕೆ ಸೆಳೆದು,
ಉಕ್ಕಿಬಹ ದುಃಖದಲಿ
ಕಣ್ಣೀರ ಕರೆಯುತಲಿ
ನುಡಿಯಲಾರದೆ ತೊದಲಿ
  ಮುತ್ತಿಟ್ಟಳೆನಗೆ!
ಆ ಚಿತ್ರ, ಇದೊ, ಮರಳಿ
  ತೋರುತಿದೆ ಬಗೆಗೆ!

ಏನನೋ ಯೋಚಿಸುತ
ಕುಳಿತಿದ್ದೆನಲ್ಲಿ
ತರಳೆ ತಂಗಿಯು ಸಹಿತ
ಇರೆ, ಪಕ್ಕದಲ್ಲಿ.
ಜಾರಿದುದು ಆ ಹೊತ್ತು.
ಒಮ್ಮೆಗೇ ಅತ್ತತ್ತು
ತರಳೆ ಚೀರಲು ಆಗ
ಎದೆಯಲುಗಿತಳುಕಿ!
ತಾಯಿಯನು ಒಯ್ವಾಗ
ನೋಡಿದೆವು ಇಣುಕಿ!

ಅವರಿವರು ಜನರೆಲ್ಲ
ನಮ್ಮೆದುರು ಬಂದು
ನಿಮಗೆ ಪುಣ್ಯವು ಇಲ್ಲ
ತಬ್ಬಲಿಗಳೆಂದು
ಕಣ್ಣೀರ ಸುರಿಸಿದರು
ನಮ್ಮೊಡನೆ ಮರುಗಿದರು.
ವಿರಹತಾಪವು ಹೆಚ್ಚಿ
ಕೊರಗಿಸಿತು ಅಂದು.
ನೆನಪು ಎಲ್ಲವ ಬಿಚ್ಚಿ
ಕೊರೆಯುತಿದೆ ಇಂದು!

ಓ, ನೆನಪೆ! ಸಾರತ್ತ
ತೋರದಿರು ಅದನು!
ದುಃಖದಲಿ ದೂಡುತ್ತ
ಕೊಲ್ಲದಿರು ನೀನು!

ವರುಷಗಳ ಬೇಗೆಯಲಿ
ಆ ಚಿತ್ರ ಮರಳುತಲಿ
ಎದೆ ಹಿಂಡಿ ಹೀರುವುದು
ಹಾ, ತಡೆಯಲಾರೆ!
ಎಂದಿಗಿದ ಮರೆಯುವುದು ?
ಹಾ, ಮರೆಯಲಾರೆ!

---

## ಪಂಪನಿಗೆ

ಉತ್ತುಂಗ ಧವಳಗಿರಿ ಶಿಖರ ವೈಖರಿ ಬೀರಿ
ಸಾಹಿತ್ಯ ಸುಂದರಿಯ ಮಂಗಳದ ಕೃಪೆಯಾಂತು
ಕನ್ನಡದ ಬಾನಿನಲಿ ಧ್ರುವತಾರೆಯೋಲ್ ನಿಂತು
ಸಂಶೋಭಿಸಿಹೆ ಕೀರ್ತಿದುಂದುಭಿಯ ದನಿ ಸಾರಿ!
ವ್ಯಾಸ ಜಿನಸೇನರಾರಾಮದಲಿ ಓಲಾಡಿ
ಧರ್ಮಸಾಹಿತ್ಯಗಳನೊಂದುಗೂಡಿಸಿ ನಡೆಸಿ
ಅಚ್ಚಗನ್ನಡದೊಡನೆ ಸಕ್ಕದವ ತುಸು ಬೆರೆಸಿ
ಧನ್ಯನೆನಿಸಿದೆ ನೀನು ದಿವ್ಯಕಾಣ್ಕೆಯ ನೀಡಿ!
ಹಲವು ಶತಮಾನಗಳು ತುಂಬಿ ಬಂದಿರಲಿಂದು
ನಿನ್ನಮಲಕೃತಿಗಳನು ಎಮ್ಮ ಕಂಗಳಿಗೊತ್ತಿ
ಗುರುಭಕ್ತಿ ಭಾವದಲಿ ಮುಗಿದ ಕೈಗಳನೆತ್ತಿ
ಒಕ್ಕೊರಲ ಮೇಳದಲಿ ತಲೆಬಾಗುವೆವು ನಿಂದು!
ಅವ್ಯಕ್ತರೂಪದಿಂ ಅಂತರಂಗದಿ ನೆಲೆಸಿ
ಓ, ಆದಿಕವಿವರ್ಯ! ನುಡಿಸೆಮ್ಮ ನೀ, ಹರಸಿ!

---

# ಸಲಿಗೆ

ಏನು ನಾಚಿಕೆ ನಿನಗೆ! ಏನು ಲಜ್ಜೆಯೆ ನಿನಗೆ!
ಮಂಜುಕವಿದಂತೆ ಕವಿದಿಹುದು ನಡುವೆ!
ನೋಡಿ ನೋಡದ ಮುನ್ನ ಓಡಿ ಅಡಗುವೆ ಒಳಗೆ
ಒಲಿದ ಹೃದಯದ ಎದುರು ಏನು ಭಯವೆ?

ನುಡಿ ತೊದಲು, ನಡೆ ಮಿಂಚು, ಕಣ್ಣನೋಟವೊ ಕೊಂಕು.
ಏಕಿನಿತು ಹುಚ್ಚು ಮುಚ್ಚುಮರೆ ನಿನಗೆ?
ಸಾಕು ಬಿಡು, ಬಿಂಕ ಬಿನ್ನಾಣಗಳ ಹೊರ ನೂಕು.
ನೀ, ಕಲಿತ ಧೈರ್ಯವನು ತೋರಿಸೆನಗೆ!

ಮೊಟ್ಟಮೊದಲಿನ ನೋಟ ಒಲುಮೆಯನು ಉಕ್ಕಿಸಲು
ಮನವಾರೆ ಮೆಚ್ಚಿದೆವು ಅರೆಚಣದಲಿ.
ಬಂಧುಬಳಗದ ಹರಕೆ, ಶಾಸ್ತ್ರಗಳು, ನುತಿಗೊಡಲು
ಕೈಯ ಹಿಡಿದಿಹೆವು ಎಲ್ಲರೆದುರಿನಲಿ.

ಹೊಸದೊಂದು ಸೃಷ್ಟಿಯೇ ಕಾದಿಹುದು ನಮಗಾಗಿ
ನಮ್ರ, ನುಡಿ, ನೋಟದಲಿ ಕಣ್ಣತೆರೆಯೆ!
ನಿನ್ನೆ ಮೊನ್ನೆಯ ಕನಸು ನಿಜದ ಮೇಲುಮೆಗಾಗಿ
ಕಾತರಿಸಿ ಕಾಯುತಿದೆ ಜೀವ ತಳೆಯೆ!

ಒಲುಮೆ ಬೆಳಕೆರೆವ ಭಾಗ್ಯಧಾರೆಯಲಿ
ಮಂಜಿನಂದದ ಲಜ್ಜೆ ಕರಗಿ ಬರಲಿ!
ಸದ್ದಿರದೆ ಮೊಗ್ಗರಳಿ ಬಿರಿವ ತೆರದಿ
ಮೆಲುಮೆಲನೆ ನಮ್ಮ ನಾವರಿವ ಮುದದಿ!

---

# ಮುನ್ನುಡಿ

ವರುಷ ವರುಷದ ಬಯಕೆ ತಾನದು
ಒಂದೆ ಚಣದಲಿ ಫಲಿಸಿತು!
ಹುಚ್ಚು ಕಾತರ ತುಂಬಿ ಬಂದುದು
ಇಂದು ಮುನ್ನುಡಿ ಬರೆಸಿತು!

ಒಲ್ಲೆ ಎನ್ನಲು ಬಾಯಿ ಬಾರದು
ಎಂತು ಬೇಕು ಎನ್ನುವೆ?
ನಿನ್ನ ಕಣ್ ಕೈಗಂಬವಾದುದು
ಬೇಕು ಎಂದಿತು ಮೌನವೆ!

ಸಿರಿಯ ಮುಗ್ಧತೆ ಮುಖದ ಮೇಲ್ಗಡೆ
ಹರಡಿ ಹಬ್ಬವ ಮಾಡಿದೆ!
ಎಳೆಯ ಚಪಲತೆ ಎಂದೊ ಬಿಡುಗಡೆ
ಎಂದು ಕಾಯುತ ನಿಂತಿದೆ!

ಏಕೆ ನಡುಗುವೆ, ಏಕೆ ಬೆದರುವೆ.
ಹೊಸತು ಅನುಭವ ಬಲ್ಲೆನು.
ಸಾಕು ನಗದಿರು, ಜೋಕೆ ಹೃದಯವೆ
ನಿನ್ನ ಪ್ರೇರಣೆ ಎಂಬೆನು!

ಒಲುಮೆ, ಕಾತರ ಕೈಯ ಜೋಡಿಸಿ
ಕುಣಿದು ಕರೆಯಲು ನಗುತಲಿ
ಮೊಟ್ಟಮೊದಲಿನ ಮುತ್ತ ಪೋಣಿಸಿ
ತಣಿಸಿ, ತಣಿದೆನು ನಿನ್ನಲಿ!

---

## ಶಂಕೆ

ನಿನ್ನ ಹನಿಗಣ್ಣ ಕಂಡೊಡನೆ ಬಲು ಬೆದರಿದೆನು
ನನ್ನೆದೆಯೆ ಕಂಪಿಸಿತು ನಡುಗಿ!
ಏನು ತಪ್ಪಿದೆನೆಂದು ಬಲು ನೊಂದು ಅಳುಕಿದೆನು
ಮಂಕು ಕವಿದುದು ಶಂಕೆ ಮುಸಗಿ!

ನುಡಿನುಡಿದು ನಗುನಗುತ ಕಳೆದ ಗಂಟೆಯ ಹೊತ್ತು
ನಿಮಿಷದಲಿ ನಂಜಿಡಿದು ಹೋಯ್ತು.
ಮುಗುಳುನಗೆ ಮರೆಯಾಯ್ತು, ಅಹಿತ ಆವರಿಸಿತ್ತು
ಮನವೆಲ್ಲ ಮರುಭೂಮಿಯಾಯ್ತು!

ನೋಡಲಾರೆನು ನಿನ್ನ ಕೆಂಪಿಡಿದ ಕಂಗಳನು
ನಿನ್ನ ಬಗೆ ಕದಡಿರುವ ಪರಿಯ.
ತಾಳಲಾರೆನು ನಾನು ನಿನ್ನೆದೆಯ ಬೇನೆಯನು
ನಿನ್ನ ಮೂಕ ನೋವಿನ ಬಿಸಿಯ.

ನೂರಾರು ಹೆಣ್ಣುಗಳು ನೊಂದು ಬೆಂದಿರುವುದನು
ಕಂಡಿರುವೆ ಕೇಳಿರುವೆ ನಾನು.
ಸುಳಿಯಗೊಡೆನೆಂದು ಸಂಕಟದ ನಿಶ್ವಾಸವನು
ಹಟ ತೊಟ್ಟು ಬಂದಿರುವೆ ನಾನು.

ನಿನ್ನ ಸಂತಸಕೆಂದು ಅಸುವ ಮುಡಿಪಿಟ್ಟಿರುವೆ
ನೀನಿರಿತು ಕುದಿವುದನು ಒಲ್ಲೆ.

ನನ್ನ ತೋಳ್ ಬಲವೆಲ್ಲ ವಿಾಸಲಾಗಿಟ್ಟಿರುವೆ
ಹೆಣ್ಣು ಬಾಳಿನ ನೋವ ಬಲ್ಲೆ.

ಕಷ್ಟ ನಷ್ಟಗಳೆಲ್ಲ, ದೂರು, ದೂಷಣೆಯೆಲ್ಲ
ತೃಣ ಸಮವು ನಿನ್ನ ಬಲವಿರಲು !
ಯುಗ ಯುಗದ ನನ್ನ ಧೈರ್ಯ ಸ್ಥೈರ್ಯಗಳೆಲ್ಲ
ನುಚ್ಚಾಗುವುವು ನೀನೆ ಅಳಲು !

---

## ಬುತ್ತಿ

ಹಳೆಯ ಕಥೆಯೆ ಮುಗಿಯಲಿಲ್ಲ
  ಹೊಸ ಸಮಸ್ಯೆ ಮೂಡಿದೆ!
ದೇಶ ದೇಶ ದೇಶವೆಲ್ಲ
  ಮತ್ತೆ ಕುದಿಯತೊಡಗಿದೆ!

ಯುದ್ಧ ನಿಂತರೇನು ಅತ್ತ
  ಇತ್ತ ಪ್ರಕೃತಿ ಕೆರಳಿದೆ!
ನೋವು ಹರಡಿ ಸುತ್ತಮುತ್ತ
  ಸಾವ ದಾಡೆ ತೆರೆದಿದೆ!

ಹರಿಯುತಿತ್ತು ಹಾಲ ಹೊಳೆ!
ತುಂಬುತಿತ್ತು ಸುಗ್ಗಿ ಬೆಳೆ!
ತೊಳಗುತಿತ್ತು ನಮ್ಮ ಇಳೆ!
  ಎಂಥ ಕಾಲ ಬಂದಿತು,
    ಎಂಥ ಗೋಳ ತಂದಿತು!

ಮಳೆಯ ಹನಿಯೆ ಬೀಳಲಿಲ್ಲ
ಇಟ್ಟ ಬೆಳೆಯು ಏಳಲಿಲ್ಲ
ಸುಡುವ ಧಗೆಗೆ ಬಿಡುವೆ ಇಲ್ಲ
  ಭೂಮಿ ಬಾಯಿತೆರೆದಿದೆ
    ಎಲ್ಲ ಒಣಗಿ ನಿಂತಿದೆ!

ಹೊಟ್ಟೆ ಹಸಿವ ಕಾಡ ಕಿಚ್ಚು
ಹೊತ್ತಿಕೊಂಡು ಉರಿದಿದೆ.
ಮಾನಕಿಂತ ಹಣವೆ ಹೆಚ್ಚು
ಎಂಬ ಭಾವ ಬಲಿದಿದೆ.
ನಾಡು ನಾಡೆ ನಡುಗಿದೆ
ದಿಕ್ಕುಗೆಟ್ಟು ತೊಳಲಿದೆ!

ತಮ್ಮ ಕೂಸೆ ಭಾರವಾಯ್ತು
ಹೆತ್ತ ತಂದೆ ತಾಯಿಗೆ!
ಇನಿಸು ಮೇವು ಸಿಗದೆಹೋಯ್ತು
ಎಲ್ಲ ಮೂಕ ಪ್ರಾಣಿಗೆ!

ಕಣಜ, ಕಣಜ, ಎಂಬ ಮಾತು
ಬರಿಯ ಶಬ್ದವಾಗಿದೆ.
ಕಡ್ಡಿ, ಕಾಳು, ಸೊಪ್ಪು, ಸದೆ
ಕನಸ ಗಂಟೊ ಎನಿಸಿದೆ!

ಎಲ್ಲ ಬರಿಯದಾಗಿದೆ
ಹೊಟ್ಟೆ ದೊಡ್ಡದಾಗಿದೆ!

ಕರೆದು ಕರೆದು ಕಾಳುಕೊಡುವ
ಕಾಲವೆಂದೊ ಹೋದುದು.
ಸಾಲು ನಿಂತು ಪಡಿಯ ಕೊಳುವ
ಕಾಲವಿಂದು ಬಂದುದು!

ದುಡಿದು ಮಡಿವ ದೇಹಯಂತ್ರ
ಇದೋ, ಜಪಿಸುತಿರುವುದು!

ಹಸಿವು ಹಸಿವು ಎಂಬ ಮಂತ್ರ
ಬಿಡದೆ ಮಿಡಿಯುತಿರುವುದು!
ಹೊಟ್ಟೆಪಾಡ ನೀಗಿಕೊಳಲು
ಬಟ್ಟೆಪಾಡು ಉಳಿವುದು
ಬಟ್ಟೆಪಾಡ ನೋಡಿಕೊಳಲು
ಹೊಟ್ಟೆಪಾಡು ಮಿಗುವುದು.
ಹೊಟ್ಟೆ ಬಟ್ಟೆಗಾಗದು
ನಿತ್ಯ ನಾವು ದುಡಿವುದು!

ಕೋಟಿ ಕೋಟಿ ಜನಗಳಿದ್ದು
ಕೇಳದಿಹುದು ಅವರ ಸದ್ದು
ತ್ರಾಣವಿಲ್ಲದಂತೆ ಬಿದ್ದು
ಪಾಡುಪಡುತಲಿರುವರು
ಅಣ್ಣ, ತಮ್ಮ, ಎಲ್ಲರು!

ಅರ್ಧ ಹೊಟ್ಟೆ ತುಂಬುತಿತ್ತು
ಇನಿತು ದಿವಸ ತಪ್ಪದೆ
ಅದಕೆ ಕೂಡ ಕಲ್ಲು ಬಿತ್ತು
ಇಂದು ಅನ್ನ ಸಿಕ್ಕದೆ!

ನರನ ಎದೆಯ ಕ್ರೌರ್ಯ ಕೆರಳಿ
ಹಗೆಯ ಬಿತ್ತಿ ಕೆಡಹಿತು.
ರಕ್ತ, ಮಾಂಸ, ದೇಹವುರುಳಿ
ಶಾಂತಿ ಹೆಸರೆ ಅಳಸಿತು.
ಮುಗಿಯದೇನು ಆ ಕಥೆ–ಕೊನೆ
ಗಾಣದೇನು ಈ ವ್ಯಥೆ?

ಹಿಂಗದಂತೆ ಅಂತೆ ಇಹುದು
ಹೊಟ್ಟೆಗಿರದ ಬಡತನ!
ಇನ್ನು ಸಡಿಲವಾಗದಿಹುದು
ನಮ್ಮ ದಾಸ್ಯಜೀವನ!
ನಮ್ಮ ರಕ್ತ ಹೀರಲು-ಇವು
ಸಾಲದೇನು ಕೊಲ್ಲಲು?

ಭೂಮಿ ಬೆಂದು, ಬಾಯಿ ತೆರೆದು
ಹಸುರ ಹೆಸರನಡಗಿಸಿ,
ಅನ್ನ ನೀರುಗಳನು ತೊಡೆದು
ಬರಕೆ ಬಿಜಯಮಾಡಿಸಿ,
ಕಾಡಬೇಕೆ ನಮ್ಮನು-ಬಡ
ಪಾಯಿ ದೀನ ಜನರನು?

ಹಳೆಯ ಗೋಳು ಕಳೆವ ಮುನ್ನ
ಮತ್ತೆ ಮತ್ತೆ ಹೊಸತು ಬನ್ನ
ಬಂದು ಕಾಡುತಿರಲು ನಿನ್ನ,
ಎಂದು ತಾಯಿ ಬಿಡುಗಡೆ?-ನಿನ
ಗೆಂದು ಇನ್ನು ಮುನ್ನಡೆ?

ಅಂತು, ಇಂತು, ಸಾವು ನೋವು
ಇವೇ ನಮ್ಮ ಬುತ್ತಿಯೆ!
ನಿನ್ನದಾವ ಕರ್ಮಫಲವು
ತಾಯಿ, ಭರತಮಾತೆಯೆ!

---

# ನಗುನಗುತ ಹಗುರವಾಗು

ನಗುನಗುತ ಹಗುರವಾಗು–ಓ, ಮನವೆ!
ನಗುನಗುತ ಹಗುರವಾಗು!

ವಿಷಗಳಿಗೆ ಬಂದೀತು, ರಸಗಳಿಗೆ ಸಂದೀತು,
ನಗುನಗುತ ಹಗುರವಾಗು!
ಬೆಳಕು ನೆಳಲುಗಳಂತೆ ಸುಖ ದುಃಖ ಬಂದೀತು
ನಗುನಗುತ ಹಗುರವಾಗು!

ಮೇರುಪರ್ವತ ಗಾತ್ರ ಸುಖ ಕಳೆದುಹೋದೀತು
ಕಣ್ಮುಚ್ಚಿ ತೆರೆವ ಮುನ್ನ!
ಸಾಸಿವೆಯ ಕಾಳನಿತು ಅಳಲ ಕರೆ ನಿಂತೀತು
ಕೊಂದು ಕಾಟುತಲಿ ನಿನ್ನ!

ವಿಷಗಳಿಗೆ ಬಂದಾಗ ಕೊರಗಿ ನೀ ಕುಗ್ಗದಿರು
ನಗುನಗುತ ಹಗುರವಾಗು.
ರಸಗಳಿಗೆ ಬಂದಾಗ ಹಿಗ್ಗಿ ಮೈಮರೆಯುದಿರು
ಸಂಯಮದಿ ಭೋಗಿಯಾಗು.

ಹಂಬಲಿಸಿ ಹಲಬುತಿರೆ ಭುಗಿ ಭುಗಿಲು ಭುಗಿಲೆಂದು
ಹೆಚ್ಚೀತು ನಿನ್ನ ಅಳಲು.
ಧೃತಿಗೆಡದೆ ನೀನಿರಲು ಹತ್ತಿರಕೆ ಬರಲೆಂದು
ನಾಚೀತು ನಿನ್ನ ಅಳಲು.

ಕಾಲಚಕ್ರವನೊತ್ತಿ ಮುಂದುಮುಂದಕೆ ನೂಕಿ
ಹಗಲಿರುಳು ಬರುವವೋಲು
ಜೀವನದ ನೌಕೆಯನು ಮುಂದುಮುಂದಕೆ ನೂಕಿ
ಬಂದಾವು ಗೆಲುವು ಸೋಲು !

ಸುಖದ ಹಾಲ್ಗಡಲಲ್ಲಿ ಮೆಲುಮೆಲನೆ ನಡೆದೀತು
ರಾಜಹಂಸನನು ಹೋಲಿ!
ದುಃಖ ದಾಳಿಯನಿಡಲು ಎಡವಿ ಮುಗ್ಗರಿಸೀತು,
ಎಂತೊ ಸೇರುವುದು ತೀಲಿ!

ನಗೆಯ ಕಾಲಂದುಗೆಯು ಝುಣಝುಣರು ಎಂದೀತು
ಹರುಷದಲಿ ಮನವು ಉಕ್ಕಿ!
ಸತ್ವವುಡುಗುತ ದುಃಖ ಹೆಸರಳಸಿ ಹೋದೀತು
ನಗೆಯ ಸುಳಿಯೊಳಗೆ ಸಿಕ್ಕಿ!

---

# ಬಟ್ಟಬಯಲು

ಕಣ್ದಿಟ್ಟ ಮುಟ್ಟುವಿನೆಗಂ ತಬ್ಬಿ ಹಬ್ಬಿಹುದು
ಬಟ್ಟಬಯಲು! ಭೂವಲಯವುಂ ತೆಕ್ಕೆಯೊಳಗಿಟ್ಟು
ಘೋಷಿಸುವ ನೀಲ ಪಾರಾವಾರವುಂ ಕಂಡು
ಬೆಪ್ಪು ಬೆರಗಾಗಿ ವಿಸ್ಮಯ ಮನೋಭಾವದಲಿ
ನಿಲ್ವ ಬಾಲಕನಂತೆ ಉಬ್ಬಿಹುದು ನನ್ನ ಎದೆ
ಮೃದು ಮಧುರ ಹೂ ಹಗುರ ಹರುಷದಲೆಯಲಿ ತೇಲಿ!
ಬೆಳ್ನೊರೆಯ ಜಲಧಿಯೆದೆಯಾಳದಿಂ ಮೇಲೆದ್ದು
ಅವ್ಯಕ್ತ ರೂಪದಲಿ ಪವಮಾನ ಯಾನದಲಿ
ಜೈತ್ರಯಾತ್ರೆಯಗೈದು ಅಂತರಿಕ್ಷವನೇರಿ
ಅಂತ್ಯದಲಿ ಮೇಘರೂಪವನಾಂತು ಸಂಚರಿಪ
ನೀರ ಹನಿಯೊಲು, ಎನ್ನ ಮಾನಸ ವಿಹಂಗಮುಂ
ನಿತ್ಯ ಜೀವನದ ಶೋಕ ಸಂಕೋಲೆಯ ಕಳಚಿ
ಮುಗಿಲ ಹಗುರನು ಮೀರಿ ಹಾರುತಿದೆ ಗರಿಗೆದರಿ
ಬಟ್ಟಬಯಲಿನ ಎಂಟು ದಿಕ್ಕುಗಳ ಮೇಲೆಲ್ಲ!
ಶರತ್ಕಾಲದೆದೆಯಾಳದಿಂ ಶುಭ್ರ ಜ್ಯೋತ್ಸ್ನೆಯ
ಸೂಸಿ ಮೆರೆಯುವ ಹುಣ್ಣಿಮೆಯ ಚಂದ್ರಬಿಂಬದೊಲು
ಯಾವುದೋ ಆನಂದ ಆಹ್ವಾನಗುಡುತಿಹುದು
ಬಟ್ಟಬಯಲಿಂ ಎನಗೆ!

ಒಂದು ಹದ ಮಳೆ ಬೀಳೆ
ಪೊಡವಿ ಮೈಕೊಡವಿ ಚೇತನಂಗೊಂಡೆಚ್ಚೆತ್ತ
ಪರಿಯ ಕುರುಹೆನಲು ಹೊಸ ಹಸುರ ಸಿರಿ ಚಿಗುರಿಹುದು
ಸುತ್ತು ಮುತ್ತಲು ಬಿಡದೆ ತುಂಬು ಇಂಬನು ಸೂಸಿ!

ಮೋಹನೆ ದಿಗಂಗನೆಯ ಮುಂಗುರಳ ಸುರುಳಿಯೊಲು
ವೀಚಿ ವೀಚಿಯಲಿ ತೆರೆ ತೆರೆಗಳಲಿ ಹಬ್ಬಿಹುದು
ಬಟ್ಟಬಯಲಿನ ಉಬ್ಬು ತಗ್ಗುಗಳ ವಿನ್ಯಾಸಂ!
ಬಟ್ಟಬಯಲಾದೊಡೇಂ? ಇದು ಶೂನ್ಯಮಲ್ತು!
ಲಕ್ಷೋಪಲಕ್ಷ ನಕ್ಷತ್ರ ವೈಢೂರ್ಯಮಂ
ಹೃದಯ ಪಾತ್ರದೊಳಿಟ್ಟು, ನಡುಹಗಲ ವೇಳೆಯಲಿ
ದೀನ ದಾರಿದ್ರ್ಯಮಂ ಪೊತ್ತು ಕಡು ಬಡವನೊಲು
ಕಾಂಬ ಶುಭ್ರ ನೀಲಿಮಾಂಬರದಂತೆ ಈ ಬಯಲು
ಬರಿಬಯಲು ನೈಸರ್ಗ ಶತ್ರು ಪಾಪಿಷ್ಟಂಗೆ!
ಭುವನಮೋಹನ ಕಲ್ಪನಾ ಶೂನ್ಯ ನೋಟಕ್ಕೆ!
ನೋಡುತಿರೆ, ನೋಡುತಿರೆ, ಮೂಡುವುದು ಮನದೊಳಗೆ
ಮೃದು ಮಧುರ ಮಂದಹಾಸಂ! ಸಂತಸ ವಿಲಾಸಂ!
ತೇಂಕಾಡುವುದು ಹೃದಯ ಮುದದ ಮಕರಂದಮಂ
ಸವಿದು. ಕಬ್ಬದ ಮನೋರಮೆಯ ಸಾನ್ನಿಧ್ಯದಲಿ
ನಿಂತು, ಒಳಗಣ್ ಕಾಣುವುದು ಸೌಂದರ್ಯದುದಯ
ಸಾರಮಂ!

ಸುತ್ತ ದಿಕ್ತಟವನಾಲಿಂಗಿಸಿಹ
ಭವ್ಯ ವೈಶಾಲ್ಯ, ಸಂರಂಭವನು ತೋರ್ವಂತೆ,
ವ್ಯಾಪ್ತಿ, ವಿಸ್ತಾರಗಳ ಸಾರುತಿಹ ನಭದಂತೆ,
ಅನಂತತೆಯ ಮಹೋಪದೇಶಮಂ ಭೋರ್ಗರೆದು
ಪಾಡುತಿಹ ನಿಸ್ಸೀಮ ನೀಲಿ ಸಾಗರದಂತೆ,
ಹಬ್ಬಿಹುದು, ಹರಡಿಹುದು, ಹಿಗ್ಗಿನಲಿ ಬಟ್ಟಬಯಲು!
ಬಟ್ಟಬಯಲೆದುರಿನಲಿ ಸಂಕುಚಿತ ಸಾಯುತಿದೆ!
ನನ್ನೆದೆಯೊ ಜಗದಗಲ ಹರಡುತಿದೆ ಚಣಚಣಕೆ.
ಹರುಷ ಹಿಗ್ಗುತ ಬರಲು ಹಬ್ಬ ನಡೆದಿದೆ ಒಳಗೆ!

ಓ, ಗೆಳೆಯ! ಈ ಸೃಷ್ಟಿ ಬರಿ ಮಾಯೆ ಎನ್ನದಿರು!
ಇದುವೆ ಬೆಳೆವ ಬದುಕಿಗೆ ದಾರಿಯನು ತೋರಿಪುದು.
ದಿನದಿನದ ಚಣಚಣದ ಸೌಂದರ್ಯದರ್ಶನಂ
ಬದುಕು ಬರಿ ಹುಸಿ ಎನುವ ಮೂರ್ಖಂಗೆ, ಮೂಢಂಗೆ
ಸೃಷ್ಟಿ ದೃಷ್ಟಾಂತವನು ತೋರಿ ನುಡಿವ ಉಪದೇಶಂ!
ರೋದೋಂತ ವಿಶ್ರಾಂತ ಜಲ, ಬಯಲ, ವಿಸ್ತೃತಂ
ಭವ್ಯ ವೈಶಾಲ್ಯ ಭಾವಮಂ ಬೋಧಿಸುವ ಮಾರ್ಗಂ!
ನಾನೆ ಮೇಲೆಂಬ ಹಮ್ಮನಿಳಿಸುವ ಉಪಾಯಂ!

---

# ಆತ್ಮವೇದನೆ

ಆತ್ಮಗೌರವವೆಲ್ಲ ನುಚ್ಚು ನುರಿಯಾಯಿತಯ್ಯ!
ನಿತ್ಯಸೇವಕವೃತ್ತಿ ಹೆಚ್ಚು ಪ್ರಿಯವಾಯಿತಯ್ಯ ||ಪ||

ಕಾಸಿನಾಸೆಗೆ ಸೋತು ದಾಸನಾದೆನು ನಾನು
ಪರರ ಹಂಗಿನ ಬಲೆಗೆ ಒಳಗಾದೆನಯ್ಯ!
ಜಾತಿ, ಮತ, ಕುಲ, ಗೋತ್ರಗಳು, ಸೆಣಸೆ, ಮನ ತಾನು
ದಿಕ್ಕುಗಾಣದೆ ತೊಳಲಿ ಶರಣಾದುದಯ್ಯ!

ಅರ್ಥವಿಲ್ಲದೆ ಬರೆದು ಸ್ವಾರ್ಥವನು ಸಾಧಿಸುವೆ
ನಿತ್ಯ ನಿತ್ಯವು ದುಡಿವೆ ಕೈಗೊಂಬೆಯಂತೆ!
ಮಾತು ಮಾತಿಗು ಬಾಗಿ ಕೈಕಟ್ಟಿ ನಿಂತಿರುವೆ
ನೆರೆಮನೆಯ ಬಾಗಿಲಲಿ ಪರದೇಶಿಯಂತೆ!

ನುಡಿಯ ಮೇಲುಮೆಗಾಗಿ ಮುಡುಪಿಟ್ಟ ಈ ಬಾಳು
ಪರರಡಿಯ ಸೇವಿಸುವ ಗತಿಗೆ ಗುರಿಯಾಯ್ತು!
ಮುಗಿಲ ಮುಟ್ಟುವ ಆಶೆ ಪುಡಿಯಲುರುಳಿತು ಕೇಳು,
ಹುಟ್ಟು ಬದುಕುಗಳಿಂದು ಬರಿ ಆಟವಾಯ್ತು!

ಗುಣಕೆ ಗೌರವವಿಲ್ಲ, ಮತಿಯ ಗಣಿಸುವರಿಲ್ಲ
ಹಣವಂತ ತಾನೊಬ್ಬ ಬಲವಂತನಂತೆ!
ಹಿಡಿಕೂಳ ಪಡಿಗಾಗಿ ಕಲಿತ ವಿದ್ಯೆಯನೆಲ್ಲ
ಬಲಿಗೊಟ್ಟು ನಿಂತಿರುವೆ ಮಂಕು ಬಡಿದಂತೆ!

ಆತ್ಮಸಿದ್ಧಿಯನೊಲ್ಲೆ, ಆತ್ಮತುಷ್ಟಿಯನೊಲ್ಲೆ,
ಪುಡಿಕಾಸೆ ಕೈಲಾಸ! ಧನಿಕ ಪರಮೇಶ!
ಸತ್ಯ ಸೌಂದರ್ಯಗಳನೊಂದನೂ ನಾನೊಲ್ಲೆ
ಗೊತ್ತು ಗುರಿಯಿರದ ಈ ಬದುಕು ಬರಿ ವೇಷ!

---

# ಕರಾಳಿ

ಯೌವನದೈಸಿರಿ ತುಂಬಿಹ ಎದೆಯಲಿ
ಸೌಂದರ್ಯದ ನವ ಮಧುವನು ಹೀರಿ,
ಕಲ್ಮಷಪೂರಿತ ವಿಷವನು ಕಾರಿ
ಕೆರಳಿರುವಳು ಕಾಮು ಕರಾಳಿ!
ಬಿಸಿಕೆನ್ನೀರಿಗೆ ಬಾಯ್ ತೆರೆಯುತ್ತಲಿ
ಅಸಹ್ಯ ಭಾವದ ಕಿಡಿಗಾರುತ್ತ
ಗರ್ಜಿಸಿ ಕಂಪಿಸಿ ಆರ್ಭಟಿಸುತ್ತ
ಚೀರುತ್ತಿರುವಳು ಭಯ ತಾಳಿ!

ಸಿಡಿಲಿಗೆ ಸಾಯಳು; ಗುಡುಗಿಗೆ ಬೆದರಳು;
ಬಹು ಮೃದು ಮಿಂಚಿನ ನಿಶಿತಕಠಾರಿ
ಜ್ವಾಲಾಮುಖಿ ಶಿಖಿಯೂ ಹಿತಕಾರಿ
ಅನಲ ವಿಕಂಪಿತ ಅಗ್ನಿಸಖಿ!
ಓ, ಮತಿ ಕೊರಲನು ಮುರಿಯುತ್ತಿರುವಳು!
ಚಿತ್ತವೆ ತತ್ತರಿಸುತ್ತಿಹುದಲ್ಲಿ
ಸೆಳೆದಪ್ಪಿದ ಆಲಿಂಗನದಲ್ಲಿ!
ಕನಲುವಳದೊ, ಓ, ರೌದ್ರಮುಖಿ!

ಬಾಳಿನ ಸಾರವ ಚಪ್ಪರಿಸುತ್ತಲಿ
ನೃತ್ಯೋನ್ಮಾದದಿ ಹಲ್‌ಕಿರಿಯುತ್ತ
ಬಿಚ್ಚಿದ ಮುಡಿಯದು ಕೆದರಿರೆ ಸುತ್ತ
ಕುಣಿವಳು ರಾಕ್ಷಸಕುಲಕನ್ಯೆ!

ರೋದನಗಾನಕೆ ಮನವೊಲಿಯುತ್ತಲಿ
ಮೆಲುಮೆಲುನೈತರೆ ವಿಕಟ ವಿಕಾರ
ಕರಗಲು ಹರೆಯದ ಸಿರಿ ಸಿಂಗಾರ
ನಲಿವಳು ಭೈರವಿ ಮನ ಮಾನ್ಯೆ!

ಪ್ರೇಮದ ಹೆಸರಲಿ ಭ್ರಾಂತಿಯ ಬೀರುತ
ದುಷ್ಫಲ ಯಜ್ಞದ ಕುಂಡದಿ ದೂಡಿ
ಸಿಡಿಯುವ ಬಾಳಿನ ಪರಿಯನು ನೋಡಿ
ಸಂತಸಪಡುವಳು ಈ ಕ್ರೂರಿ!
ನಿರ್ಬಲ ಚಂಚಲ ಚಪಲವ ಕೆಣಕುತ
ನಿತ್ಯ ಕಳಂಕದ ಚಿಹ್ನೆಯ ಮುಡಿಸಿ
ನಡೆವಳು ಅರೆಚಣ ಸುಖವನು ಉಣಿಸಿ,
ಭೀತಿ, ಭಯಂಕರ ಹೆಮ್ಮಾರಿ!

---

# ಸಖಿ

ಮನದ ಕಲ್ಮಷವೆಲ್ಲ ತೊಳೆದು ತಿಳಿಗೊಳವಾಯ್ತು
ಅಮರ ಗಂಗಾನದಿಯು ನೀನು!
ಚಪಲ, ಚಂಚಲ, ನಿಂತು ಚಿತ್ತ ಸುಸ್ಥಿರವಾಯ್ತು
ಅನುಪಮ ಹಿಮಾಚಲವು ನೀನು!

ನನ್ನೆದೆಯ ಒಲವಿನಾವೇಗವನು ಈಗರಿತೆ
ಇಂತು ತಿಳಿವೆರೆದ ಗುರು ನೀನು!
ನಿನ್ನ ಸನ್ನಿಧಿಯಲ್ಲಿ ಹಿಂಗಿ ಹೋದುದು ಕೊರತೆ
ಶಾಂತಿ ದೇವತೆಯ ಸಖಿ ನೀನು!

ಯೌವನದ ನಳಿತೋಳ್ಗಳಲಿ ನಲಿವ ಹಸುಗೂಸು,
ನನ್ನ ಕಣ್ಗೊಂಬೆ ಸಮ ನೀನು!
ನಮ್ಮ ನಿಮ್ಮವರ ನಲಿಸುವ ಕುಲದ ಕೈಗೂಸು,
ಹಿರಿಯ ಹೊಣೆ ಹೊತ್ತಿರುವೆ ನೀನು!

ಕೊಂದು ಕಾಡುವ ಕಾಮ ಪ್ರೇಮ ಪುಳಕಿತವಾಯ್ತು
ನಲವೆರೆದ ಸ್ಪರುಷಮಣಿ ನೀನು!
ಮೆರೆವ ಹಸೆಮಣೆಯೇರಿ ಹೊಸಬಾಳು ಮೊದಲಾಯ್ತು
ಕಷ್ಟ ಸುಖಗಳ ಗೆಳತಿ ನೀನು!

---

# ವೈಷಮ್ಯ

ನಾಡಿನಲಿ ಜಾತಿ, ಮತ, ಪಂಥಗಳ ಹಗೆ ಬಿತ್ತಿ
  ನಮ್ಮ ನಮ್ಮವರೆ ಹೋರಾಡಿ ವಿಷ ಕಾರುವರು
  ಒಬ್ಬರೊಬ್ಬರ ಕಂಡು ಕರುಬಿ ಕೈಮುಸೆಯುವರು
ಉರಿ ಉರಿಯುತಿವೆ ದ್ವೇಷ ಮಾತ್ಸರ್ಯಗಳು ಹತ್ತಿ!
ಧನವಂತ, ಧನಹೀನ; ಮತಿವಂತ, ಮತಿಹೀನ;
  ಎಂಬ ತರತಮಭಾವದಲಿ ಎರಡು ಕವಲೊಡೆದು
  ನಿಂತಿರಲು ಅತ್ತಿತ್ತ ಒಬ್ಬರೊಬ್ಬರ ಜರೆದು
ಸಾಲದೇ, ಸಾಲದೇ, ಈ ಒಂದು ಅಪಮಾನ!
—ದಯೆಯೆ ಧರ್ಮದ ಮೂಲ ಎಂದು ಸಾರಿದ ನಾಡು
    ರಕ್ತದಲಿ ಮಿಂದಿಹುದು ಒಳಜಗಳಗಳ ಹೂಡಿ!
  ಸ್ವಾತಂತ್ರ್ಯದುಸುರಿನಲಿ ಬದುಕಿ ಬಾಳಿದ ಬೀಡು
    ದಾಸ್ಯದಲಿ ಕೆಡೆದಿರಲು, ಕಣ್ದೆರೆಯದೇ ನೋಡಿ!
      ಅಣ್ಣತಮ್ಮದಿರೆಂದು, ಅಕ್ಕತಂಗಿಯರೆಂದು,
      ಪೆಣ್, ಗಂಡು, ಸಮವೆಂದು, ಎಲ್ಲ ಬಾಳುವುದೆಂದು?

---

## ತಳಮಳ

ಎಂಥ ಕಳವಳವೊ, ಎಂಥ ತಳಮಳವೊ,
ಹೃದಯವನೆ ಹಿಂಡುತಿಹುದು!
ತೀರ ಮೇರೆಗಳ ಮೀರಿ ವ್ಯಾಕುಲವು
ಸುತ್ತಲೂ ಮುತ್ತಿರುವುದು!

ಸ್ಥೈರ್ಯ ಧೈರ್ಯಗಳು ಕುಸಿದು ಬೀಳುವೊಲು
ಭಯವು ಖಡ್ಗವನು ಹಿರಿಯೆ,
ರಕ್ತ ಮಾಂಸಗಳು ಬತ್ತಿ ಹೋದವೊಲು
ಶಕ್ತಿ ಹೀರಿಹುದು ಅರಿಯೆ!

ಮೂಳೆ ಮೂಳೆಗಳ ತ್ರಾಣ ಕುಂದಿಹುದು
ಎಲುಬುಗೂಡಾಯ್ತು ದೇಹ!
ನಡುಕ ಗುಡುಗಾಡಿ ಒಡಲು ಸಡಿಲಿಹುದು
ಹೆದರಿ ಹೆಚ್ಚಿಹುದು ದಾಹ!

ಚಿಂತೆ ಚೀರಿಡಲು ಚಿತ್ತ ಚಲಿಸಿಹುದು
ಕಂಬಿ ತಪ್ಪಿದೊಲು ರೈಲು!
ದಿಕ್ಕು ದಿಕ್ಕಿಗೂ ದಿಗಿಲೆ ಹಬ್ಬಿಹುದು
ಎತ್ತ ನೋಡಿದರು ಬೈಲು!

ಗಾಳಿಗೊಡ್ಡಿರುವ ಸೊಡರ ಕುಡಿಯಂತೆ
ಬುದ್ಧಿ ತತ್ತರಿಸುತಿಹುದು.
ಹುಚ್ಚು ಹೊಳೆಯೊಳಗೆ ಕೊಚ್ಚಿ ಹೋದಂತೆ
ನಿದ್ದೆಯೇ ಸುಳಿಯದಿಹುದು.

ನುಂಗಿ ನೊಣೆಯುವೊಲು, ತಿಂದು ತೇಗುವೊಲು
ಭೀತಿ ತುಳಿಯುತಿದೆ ಕೆರಳಿ.
ಹೃದಯವೇದನೆಯು ತಾಳ ಹಾಕುವೊಲು
ಬಿಡದೆ ಮಿಡಿಯುತಿವೆ ಒರಲಿ.

ಶಂಕೆ, ಆತಂಕ, ಭೀತಿ, ಸಂಶಯವು
ದಾಳಿ ನಡೆಸಿಹವು ಎಲ್ಲು!
ಶಕ್ತಿ, ಸಾಮರ್ಥ್ಯ ನೆಚ್ಚು, ಭರವಸೆಯು
ಬದುಕಿಹವೆ? ಬರಿಯ-ಸೊಲ್ಲು!

ಎಂಥ ಕಳವಳವೊ, ಎಂಥ ತಳಮಳವೊ,
ಅಲುಗಿಗಿಂತಲೂ ಹರಿತ!
ಎಂಥ ಬೇಗುದಿಯೊ, ಎಂಥ ಬೇವಸವೊ
ಸಾವಿಗಿಂತಲೂ ಕೊರೆತ!

---

# ಪುರಂದರದಾಸರಿಗೆ

ಅಚ್ಚಗನ್ನಡದ ಪದವೋದಿ ಮನಮೆಚ್ಚಿದೆನು!
ಸರಸತಿಯು ದಿವ್ಯವೀಣಾಕ್ವಣಿತದೊಲುಸಾಗಿ,
ಸ್ವಚ್ಛಭಕುತಿಯ ಸ್ಫೂರ್ತಿ ಚಿಮ್ಮಿರಲು ಹೊನಲಾಗಿ
ಕೇಳಿ, ಮೈಮರೆಯದವರಾರು ಹರಿಭಜನೆಯನು!
ಭೂ, ವ್ಯೋಮ ಪರ್ಯಂತ ಪಸರಿಸಿದೆ ಹೊಸ ನೋಟ!
ಕಂಡಕಂಡೆಡೆ ಕೃಷ್ಣನನು ಕಾಣುತಿದೆ ಕಣ್ಣು!
(ಹಗಲಿರುಳು ಹೊನ್ನ ಹೊಳಹನೆ ಕಂಡ ಈ ಕಣ್ಣು)
ನಡೆದುದೇ ಹರಿಸೇವೆ! ನುಡಿದುದೇ ಸ್ತುತಿ, ಪಾಠ!
ಭಕ್ತಿರಸದಲಿ ಮಿಂದು, ಸಂಗೀತದಲಿ ತೇಲಿ,
ಧರ್ಮದಾರತಿಗೈದು, ಅನುಭವದ ನುಡಿ ಸಾರಿ,
ಬದುಕಿನಾಳವ ಹೊಕ್ಕು ಬಾಳಿನೈಸಿರಿ ತೋರಿ,
ಮಿನುಗಿಹುದು ನಿಮ್ಮ ನುಡಿ ಅಪರಂಜಿಯನು ಹೋಲಿ!
ವ್ಯಾಸ ಬೋಧಿತ ಶಿಷ್ಯ ಹರಿದಾಸಕುಲವರ್ಯ!
ನಿಮ್ಮ ನೆನೆವುದೆ ಪುಣ್ಯ! ಪಾಡುವುದೆ ಶುಭಕಾರ್ಯ!

---

